**ವಿಶೇಷ ಸೂಚನೆ:—** ಈ ಗೀತಾಗೈಡಿನಲ್ಲಿ ಅ, ಇ, ಉ ಎಂಬ ಮೂರು ವಿಭಾಗಗಳಿವೆ. ಅನುಕ್ರಮವಾಗಿ

1) ಅ – ವಿಭಾಗದಲ್ಲಿ ಪ್ರತಿ ಪಾಠಗಳ ಸಾರಾಂಶವೂ

2) ಇ – ವಿಭಾಗದಲ್ಲಿ ಪಠ್ಯದಲ್ಲಿರುವ ಪ್ರಶ್ನೋತ್ತರಗಳೂ

3) ಉ–ವಿಭಾಗದಲ್ಲಿ ವಿಶೇಷ ವಿಷಯಗಳೂ ನಿರೂಪಿಸಲ್ಪಟ್ಟಿವೆ. ಆದರೆ ಪಠ್ಯದಲ್ಲಿದ್ದ ಪ್ರಶ್ನೆಗಳ ಬದಲಿಗೆ ಪ್ರಶ್ನಾಸಂಖ್ಯೆಗಳನ್ನು ಮಾತ್ರವೇ ಕೊಟ್ಟಿದೆ. ಲಕಿ [illegible]

**ಡಿ. ವಿ. ಹೊಳ್ಳ**



ಅ) ಸಾರಾಂಶ:— ಕ್ರಿ. ಶ. 1947ನೆ ಆಗಸ್ಟ ಹದಿನೈದರವರೆಗೆ ನಮ್ಮ ರಾಷ್ಟ್ರವು ಸ್ವತಂತ್ರವಾಯಿತು. ನಮ್ಮ ದೇಶವನ್ನು ಬ್ರಿಟಿಶ ಪಾರ್ಲಿಮೆಂಟಿನ ನಿರ್ಧಾರದಂತೆ ಆ ದೇಶದ ಪ್ರತಿನಿಧಿಯಾದ ವೈಸರಾಯಿಯು ದಿಲ್ಲಿಯಲ್ಲಿದ್ದುಕೊಂಡು ಆಡಳಿತ ನಡೆಸುತ್ತಿದ್ದನು.

ಭಾರತದಿಂದ ಬಹಳ ದೂರದಲ್ಲಿರುವ ಬ್ರಿಟಿಷರು ಚಿಕ್ಕ ದ್ವೀಪಗಳಲ್ಲಿದ್ದರೂ ವಿಶಾಲವಾದ ನಮ್ಮ ದೇಶವನ್ನು ಆಳುತ್ತಿದ್ದುದು ಆಶ್ಚರ್ಯದ ಸಂಗತಿ. ಆಗ ನಮ್ಮ ದೇಶದ ಹೆಚ್ಚಿನ ಸಂಪತ್ತು ಅಲ್ಲಿಗೆ ಸಾಗುತ್ತಿತ್ತು. ಭಾರತೀಯರಿಗೆ ಯೋಗ್ಯವಾದ ಸ್ಥಾನಮಾನಗಳೂ ದೊರೆಯುತ್ತಿರಲಿಲ್ಲ. ಇಂಥ ಸ್ಥಿತಿಯನ್ನು ಹೋಗಲಾಡಿಸಿ ಭಾರತವನ್ನು ಸ್ವತಂತ್ರಗೊಳಿಸುವುದಕ್ಕಾಗಿ ದಾದಾಬಾಯಿ ನವರೋಜಿ ಮೊದಲಾದವರು ಬ್ರಿಟಿಷರ ವಿರುದ್ಧ ಬಹಳ ಕಾಲ ಹೋರಾಟ ನಡೆಸಿದರು.

ಮಹಾತ್ಮಾಜಿಯವರು ಮುಖಂಡರಾದ ಮೇಲೆ ದ್ವೇಷಹಿಂಸಾದಿ ದುರ್ಮಾರ್ಗಬಿಟ್ಟು ಕಾಂಗ್ರೆಸ್ ಸಂಸ್ಥೆಯು ಸ್ವಾತಂತ್ರ್ಯ ಚಳವಳಿಯನ್ನು ಶಾಂತಮಾರ್ಗದಿಂದಲೇ ಬಿರುಸಾಗಿ ನಡೆಸಿತು. ಇದರಿಂದ ಬ್ರಿಟಿಷ್ ಪಾರ್ಲಿಮೆಂಟ್ ವಿಚಾರ ನಡೆಸಿ ಭಾರತೀಯರಿಗೆ ಈ ದೇಶವನ್ನು ಬಿಟ್ಟುಕೊಟ್ಟು ವೈಸರಾಯಿಯು ಲಂಡನಿಗೆ ತೆರಳಬೇಕೆಂದು ನಿರ್ಧರಿಸಿತು.

ಈ ಪ್ರಕಾರ 15-8-1847 ರಂದು ನಮ್ಮ ದೇಶದ ಆಡಳಿತವು ವರ್ಗಾಯಿಸಲ್ಪಟ್ಟಿತು. ಅಂದು 12ಘಂಟೆ ರಾತ್ರಿಗೆ ಭಾರತದ ಮೊದಲನೆಯ ಸ್ವಾತಂತ್ರ್ಯ ದಿನಾಚರಣೆಯು ಆಚರಿಸಲ್ಪಟ್ಟು ದಿಲ್ಲಿಯ ಕೆಂಪುಕೋಟೆಯಲ್ಲಿ ಹಾರಾಡುತ್ತಿದ್ದ ಬ್ರಿಟಿಷರ ರಾಷ್ಟ್ರ ಧ್ವಜವು ಅವರೋಹಣವಾಗಿ ಭಾರತದ ರಾಷ್ಟ್ರ ಧ್ವಜವು ಏರಿಸಲ್ಪಟ್ಟಿದೆ. ಮರುದಿನ ಪ್ರಾತಃ ಕಾಲ ಪ್ರಮಾಣ ವಚನ ಸ್ವೀಕರಿಸಿ ಲಾರ್ಡ್‌ಮೌಂಟ್ ಬ್ಯಾಟನ್‌ರು ಭಾರತದ ಗವರ್ನರ್ ಜನರಲ್ ಆಗಿ, ನೆಹರೂರವರು ಪ್ರಧಾನಿಗಳಾಗಿ ತಮ್ಮ ತಮ್ಮ ಅಧಿಕಾರಗಳನ್ನು ನಿರ್ವಹಿಸ ತೊಡಗಿದರು.

ಇ) ವಿಭಾಗದಲ್ಲಿ ಪಠ್ಯಪುಸ್ತಕದ ಪ್ರಶ್ನೆಗಳಿಗೆ ಉತ್ತರವಿದೆ; ಆದರೆ ಪ್ರಶ್ನೆಗಳ ಸಂಖ್ಯೆಯನ್ನು ಮಾತ್ರ ಕೊಡಲಾಗುವುದು. ಲಕ್ಷಿಸತಕ್ಕದ್ದು.

I 1) ಆ ದಿನ ನಮ್ಮ ರಾಷ್ಟ್ರವು ಸ್ವಾತಂತ್ರ್ಯ ಪಡೆದ ದಿನ. ಅಂದಿನಿಂದ ಭಾರತೀಯರಾದ ನಾವೆಲ್ಲ ಬ್ರಿಟಿಷರಾಡಳಿತೆಯಿಂದ ಮುಕ್ತರಾಗಿ, ಸರ್ವಸ್ವತಂತ್ರ ಜನಾಂಗವಾದೆವು. ಆದುದರಿಂದ ಆ ದಿನ ಪ್ರತಿವರ್ಷವೂ ಜಾತಿ ಮತ ಭೇದವಿಲ್ಲದೆ ರಾಷ್ಟ್ರೀಯ ದಿನವನ್ನಾಗಿ ಆಚರಿಸುತಿದ್ದೇವೆ.

2) 1947ನೇ ಅಗಸ್ಟ 25ಕ್ಕೆ ಮೊದಲು ನಮ್ಮ ದೇಶವನ್ನು ಬ್ರಿಟಿಷರು (ಬ್ರಿಟಿಷ್‌ಪಾರ್ಲಿಮೆಂಟ್) ಆಳುತ್ತಿದ್ದರು. ಆಡಳಿತ ನಡೆಸಿದ ಕಾಲ ಒಂದುನೂರಾ ಎಂಬತ್ತೆರಡು ವರ್ಷಗಳು.

3) ಆಡಳಿತ ವರ್ಗಾವಣೆಯು 1947ನೇ ಅಗಸ್ಟ 15ಕ್ಕೆ ನಡೆಯಬೇಕಿತ್ತು. ರೈಲ್ವೆವೇಳೆಯಂತೆ ಒಂದು ದಿನ-ರಾತ್ರಿ ಘಂಟೆ 12ರಿಂದಾರಂಭವಾಗುತ್ತದೆ. ಆದಕಾರಣ ನಡುರಾತ್ರಿ 12ಘಂಟೆ ಹೊಡೆದಾಗ ನಡೆಯಿತು.

II ತುಂಬಬೇಕಾದ ಶಬ್ದಗಳನ್ನು ದಪ್ಪಕ್ಷರದಲ್ಲಿ ಸೂಚಿಸಲಾಗಿದೆ· 1) ನಮ್ಮ ರಾಷ್ಟ್ರದ ಧ್ವಜವು **ತ್ರಿವರ್ಣ ಧ್ವಜವಾಗಿದೆ.** 2) ಬ್ರಿಟಿಷರ ರಾಷ್ಟ್ರಧ್ವಜವನ್ನು **ಯೂನಿಯನ್‌ಜಾಕ್** ಎಂದು ಕರೆಯುತ್ತಾರೆ. 3) ನಮ್ಮ ರಾಷ್ಟ್ರಗೀತೆಯಾವುದೆಂದರೆ **ಜನಗಣಮನ ಅಧಿನಾಯಕ ಜಯಹೇ** 4) **ಲಾರ್ಡ್‌ಮೌಂಟ್‌ಬ್ಯಾಟನ್‌**ರು ಭಾರತದ ಪ್ರಥಮ ಗವರ್ನರ್ ಜನರಲ್ ಆಗಿ ನೇಮಕವಾದರು. 5) **ಪಂಡಿತಜವಾಹರಲಾಲ್ ನೆಹರೂ** ಅವರು ಸ್ವತಂತ್ರ ಭಾರತದ ಪ್ರಥಮ ಪ್ರಧಾನಮಂತ್ರಿಗಳಾಗಿ ನೇಮಕವಾದರು

III ರಾಷ್ಟ್ರೀಯ ದಿನಗಳು

| | | |
|---|---|---|
| 1) | ಸೈನಿಕ ದಿನಾಚರಣೆ. | ಜನವರಿ 17 |
| 2) | ಪ್ರಜಾ ರಾಜ್ಯೋತ್ಸವ — | ,, 26 |
| 3) | ಮಹಾತ್ಮರು ಅಮರಾದುದು— | ,, 30 |
| 4) | ಜುಲಿಯನ್‌ವಾಲಾಬಾಗ್ ದಿನ | ಎಪ್ರಿಲ್ 13 |
| 5) | ಸ್ವಾತಂತ್ರ್ಯೋತ್ಸವ ದಿನ | ಅಗಸ್ಟ 15 |
| 6) | ಶಿಕ್ಷಕ ದಿನ | ಸಪ್ಟಂಬರ 5 |

7) ಗಾಂಧಿಜಯಂತಿ ಅಕ್ಟೋಬರ 2

8) ಭಾಷಾವಾರುರಾಜ್ಯೋತ್ಸವ ನವಂಬರ 1

9) ಮಕ್ಕಳ ಹಬ್ಬ ,, 14

10) ನೌಕಾ ದಿನಾಚರಣೆ ಡಿಸೆಂಬರ 21

ಉ) ನೆನಹಿಗಾಗಿ ಕೆಲವು ಸಂಗತಿಗಳನ್ನು ಕೊಡಲಾಗುವುದು.

1) ಭಾರತವು ಸ್ವತಂತ್ರವಾದಾಗ ಬ್ರಿಟನಿನ ರಾಜಕೀಯ ಪಕ್ಷ-ಲೇಬರ್ ಪಕ್ಷ. ಆಗ ಅಲ್ಲಿನ ರಾಜ ಅಥವಾ ರಾಣಿ ಎಲಿಜಬೆತ್ ರಾಣಿ 2) ನಮ್ಮ ರಾಷ್ಟ್ರಧ್ವಜದ ತ್ರಿವರ್ಣಗಳು 1 ಮೇಲೆ ಕೇಸರಿ 2 ಮಧ್ಯ ಬಿಳಿದು 3 ಕೆಳಗೆ ಹಸುರು 4 ಮಧ್ಯ ಬಿಳಿ ಬಣ್ಣದಲ್ಲಿ ನೀಲಿ ಬಣ್ಣದ ಅಶೋಕಚಕ್ರ

# 2 ಭಾರತಕ್ಕೆ ಸಮುದ್ರಮಾರ್ಗವನ್ನು ಕಂಡು ಹಿಡಿದವರು

ಅ) **ಭಾರತದೊಡನೆ** ಪಾಶ್ಚಾತ್ಯ ದೇಶಗಳ ವ್ಯಾಪಾರ ಸಂಬಂಧ ಪೂರ್ವಕಾಲದಿಂದಲೇ ನಡೆಯುತಿತ್ತು. ಆ ಕಾಲದ ವರ್ತಕರು ಭಾರತದ ಸಿಂಧುಪ್ರಾಂತದಿಂದ ಒಂಟೆಗಳಲ್ಲಿ ಸರಕುಗಳನ್ನು ಹೇರಿ ಪರ್ಶಿಯ, ಕ್ಯಾಸ್ಪಿಯನ್ ಸಮುದ್ರ ತೀರ, ಸಿರಿಯಾ ಈ ಭೂಮಾರ್ಗವಾಗಿ ಟರ್ಕಿಗೆ ಸಾಗುತ್ತಿದ್ದರು. ಅಲ್ಲಿಂದ ಸರಕುಗಳು ಗ್ರೀಸ್, ಇಟಲಿ ಮತ್ತು ಯುರೋಪಿನ ಪ್ರಮುಖ ಪಟ್ಟಣಗಳಿಗೆ ಹೋಗುತಿದ್ದುವು. ಜಲಮಾರ್ಗವಾಗಿ ಪಶ್ಚಿಮಕರಾವಳಿಯಿಂದ ಅರೇಬಿಯಾ, ಮತ್ತು ಇಜಿಪ್ಟ ಪ್ರದೇಶಗಳ ರೇವು ಪಟ್ಟಣಗಳಿಗೂ ಸಾಗುತ್ತಿದ್ದುವು. ಸರಕುಗಳು ಸಂಬಾರ ಜೀನಸುಗಳು ಇತ್ಯಾದಿ

**ಜಲಮಾರ್ಗದ ಶೋಧನೆ:-** 10ನೇ ಶತಮಾನದಲ್ಲಿ ಭೂಮಾರ್ಗಕ್ಕಿಂತ ಸಮುದ್ರಮಾರ್ಗದ ವ್ಯಾಪಾರವೇ ಹೆಚ್ಚಿತು. ಇದನ್ನು ಅರಬಿ ವರ್ತಕರು ನಡೆಸಿದರು. 15ನೇ ಶತಮಾನದಲ್ಲಿ ಐರೋಪ್ಯವರ್ತಕರೂ ವ್ಯಾಪಾರಕ್ಕಿಳಿದರು. ಆಗ ಸ್ಪೈನ್ ಪೋರ್ಚುಗಲ್ ದೇಶದ ದೊರೆಗಳು ಜಲಮಾರ್ಗವನ್ನು ಶೋಧಿಸಲು ದಕ್ಷರಾದ ನಾವಿಕರಿಗೆ ಪ್ರೋತ್ಸಾಹಕೊಟ್ಟರು. ಅವರಲ್ಲಿ ಕ್ರಿಸ್ಟಾಫರ್ ಕೊಲಂಬಸನು ಸ್ಪೈನ್ ದೊರೆಯ ಅಪ್ಪಣೆ ಪಡೆದು ಭಾರತದ ಜಲ

ಮಾರ್ಗ ಶೋಧನೆಗಾಗಿ ಹೊರಟ, ವೆಸ್ಟ್‌ಇಂಡೀಸ್ ದ್ವೀಪಕ್ಕೆ ಮುಟ್ಟಿದನು. ಐದಾರು ವರ್ಷಗಳಮೇಲೆ ವಾಸ್ಕೋಡ ಗಾಮನು ಪೋರ್ಚುಗಲ್ ದೊರೆಯ ಹೇಳಿಕೆಯಂತೆ ಆಫ್ರಿಕಾ ಖಂಡವನ್ನು ಸುತ್ತಿ 1498ರಲ್ಲಿ ಕಲ್ಲಿಕೋಟೆಗೆ ಬಂದಿಳಿದನು.

ಗಾಮನು ಶೋಧಿಸಿದ ದಾರಿಯು ಸುಯೇಜ್ ಕಾಲುವೆಯಾರಂಭವಾಗುವವರೆಗೆ ಯುರೋಪಿನವರಿಗೆ ಭಾರತದ ಹೆದ್ದಾರಿಯಾಗಿತ್ತು. ಗಾಮನು ಇಲ್ಲಿನ ವಸ್ತುಗಳನ್ನೊಯ್ದು ತನ್ನ ದೇಶದಲ್ಲಿ ಮಾರಿ ಅತ್ಯಧಿಕ ಲಾಭಪಡೆಯುತ್ತಿದ್ದುದನ್ನು ನೋಡಿದಾಗ ಅಲ್ಲಿನ ಕೆಲವು ವರ್ತಕರು ಮದ್ದು ಗುಂಡುಗಳೊಡನೆ ಇಲ್ಲಿಗೆ ಬರತೊಡಗಿದರು. ಅವರಲ್ಲಿ ಅಲ್ಬುಕರ್ಕ್‌ನು ಗೋವೆಯನ್ನಾಕ್ರಮಿಸಿ ವ್ಯಾಪಾರದ ಕೋಠಿಕಟ್ಟಿಸಿದ. ಮತ್ತೆ ಬಂದವರು ಪಶ್ಚಿಮಕರಾವಳಿಯ ಕೆಲವು ಪಟ್ಟಣಗಳನ್ನಾಕ್ರಮಿಸಿದರು. ಕಾಲಕ್ರಮೇಣ ಪೋರ್ಚುಗೀಸರ ಶಕ್ತಿ ಕಡಿಮೆಯಾಗಿ 1960ರ ವರೆಗೆ ಗೋವಾ, ಡಾಮನ್, ಡಿಯು, ನಾಗರ ಹವೇಲಿಗಳುಳಿದು, ಅನಂತರ ಭಾರತ ಸರಕಾರದ ವಶಕ್ಕೆ ಬಂದುವು.

**ಇತರ ಐರೋಪ್ಯವರ್ತಕರು:—** ಪೋರ್ಚುಗೀಸರ ನಂತರ ಹಾಲೆಂಡದ ಡಚ್ಚರು, ಡೆನ್ಮಾರ್ಕಿನ ಡೇನರು, ಇಂಗ್ಲಾಂಡಿನ ಇಂಗ್ಲಿಷರು, ಫ್ರಾನ್ಸಿನ ಫ್ರೆಂಚರು ಭಾರತಕ್ಕೆ ಬಂದು, ಕಂಪೆನಿಗಳನ್ನು ಸ್ಥಾಪಿಸಿದರು. ಕ್ರಮೇಣ ಇವರಲ್ಲಿ ಸ್ಪರ್ಧೆಯುಂಟಾಗಿ ಚಿಕ್ಕ ಚಿಕ್ಕ ಸೈನ್ಯಗಳನ್ನಿಡತೊಡಗಿದರು. ಆದರೆ ಈ ಸ್ಪರ್ಧೆಯಲ್ಲಿ ಇಂಗ್ಲಿಷರೂ, ಫ್ರೆಂಚರೂ ವಿಜಯಿಗಳಾಗಿ ಉಳಿದವರೆಲ್ಲ ಸೋತು, ವ್ಯಾಪಾರವನ್ನೇ ಬಿಟ್ಟುಕೊಟ್ಟರು.

**ಫ್ರೆಂಚರೂ-ಇಂಗ್ಲಿಷರೂ:—** ಮೊದಲಿಗೆ ಈಸ್ಟ್‌ಇಂಡಿಯಾ ಕಂಪೆನಿಯು ಜಹಾಂಗೀರನ ಒಪ್ಪಿಗೆ ಪಡೆದು ಸೂರತ್ತಿನಲ್ಲಿ ಕೋಠಿಯನ್ನು ಸ್ಥಾಪಿಸಿತು. ಮೆಲ್ಲಗೆ ಮದ್ರಾಸ್, ಬೊಂಬಾಯಿ, ಕಲ್ಕತ್ತಗಳಲ್ಲಿ ಕೋಟೆಯನ್ನು ಕಟ್ಟಿ ವ್ಯಾಪಾರವನ್ನು ಹೆಚ್ಚಿಸಿತು. ಹಾಗೆ ಫ್ರೆಂಚರ ಕಂಪೆನಿಯೂ ಅನೇಕ ಸ್ಥಳಗಳಲ್ಲಿ ಕೋಠಿಗಳನ್ನು ಕಟ್ಟಿ ಕಾರ್ಖಾನೆಗಳನ್ನು ಸ್ಥಾಪಿಸಿತು. ಹೀಗೆ ಇಂಗ್ಲಿಷರಿಗೂ ಫ್ರೆಂಚರಿಗೂ ವ್ಯಾಪಾರ ಸ್ಪರ್ಧೆ ನಡೆದು ನವಾಬರ ಒಳಜಗಳಗಳಲ್ಲಿ ಕೈ ಹಾಕಿ ತಮ್ಮ ವರ್ಚಸ್ಸನ್ನು ಹೆಚ್ಚಿಸಿ ಕೊಂಡರು. ಆದರೆ ಯುದ್ಧಗಳಲ್ಲಿ

ಫ್ರೆಂಚರ ಆಟ ನಡೆಯಲಿಲ್ಲ. ಕೊನೆಗೆ ಪಾಂಡಿಚೇರಿ ಮೊದಲಾದ ನಾಲ್ಕೈದು ಸಾಹತುಗಳಲ್ಲುಳಿದು ಭಾರತವು ಸ್ವತಂತ್ರವಾದ ಮೇಲೆ ತಮ್ಮ ದೇಶಕ್ಕೆ ತೆರಳಿದರು.

## ಭಾರತದಲ್ಲಿ ಬ್ರಿಟಿಷ್ ಸಾಮ್ರಾಜ್ಯ ಸ್ಥಾಪನೆ

ಇಂಗ್ಲಾಂಡಿನಲ್ಲಿ ಕೈಗಾರಿಕೆಯ ಕ್ರಾಂತಿಯುಂಟಾದ ಮೇಲೆ ಯಂತ್ರ ಕೈಗಾರಿಕೆಗಳ ಕಾರ್ಖಾನೆಗಳು ಹೆಚ್ಚಿದುವು. ಸರಕುಗಳು ಹೆಚ್ಚು ಹೆಚ್ಚು ತಯಾರಾಗುವಂತೆ ಕಚ್ಚಾವಸ್ತುಗಳನ್ನು ಅಧಿಕ ಪ್ರಮಾಣದಲ್ಲಿ ತರಿಸಬೇಕಾಯಿತು. ತತ್ಪರಿಣಾಮವಾಗಿ ಪರದೇಶಗಳ ಸಂಪರ್ಕ ಬೆಳಸಿದ್ದಲ್ಲದೆ ಭಾರತದ ರಾಜಕೀಯದಲ್ಲಿ ಪ್ರವೇಶಿಸಿ ಒಂದೊಂದೇ ಪ್ರಾಂತವನ್ನು ಹಿಡಿದು ಕೊನೆಗೆ ಬ್ರಿಟಿಷ್ ಕಂಪೆನಿಯು ಸಾಮ್ರಾಜ್ಯವನ್ನೇ ಸ್ಥಾಪಿಸಿತು.

ಇ) I 1) ಭಾರತದ ವ್ಯಾಪಾರವು ಭೂಮಾರ್ಗವಾಗಿ ಪರ್ಶಿಯಾ, ಕ್ಯಾಸ್ಪಿಯಾನ್ ಸಮುದ್ರತೀರ, ಸಿರಿಯಾ, ಟರ್ಕಿ, ಗ್ರೀಸ್, ಇಟಲಿ ಮೊದಲಾದ ಯುರೋಪ್ ದೇಶಗಳೊಡನೆಯೂ ಜಲಮಾರ್ಗವಾಗಿ ಅರೇಬಿಯಾ, ಇಜಿಪ್ಟ್ ದೇಶಗಳೊಡನೆಯೂ ನಡೆಯುತಿತ್ತು.

2) ಮುಖ್ಯಸರಕುಗಳು - ಸಂಬಾರದಿನಸುಗಳು, ಮುತ್ತು ವಜ್ರ, ನೀಲಿ, ಮಸ್ಲಿನ್ ಬಟ್ಟೆಗಳು, ರೇಶ್ಮೆ ಇತ್ಯಾದಿ.

3) ಮೊದಲಿಗೆ ಮುಖ್ಯವಾಗಿ ಅರಬ್ಬಿವರ್ತಕರು. (ಮತ್ತೆ ಐರೋಪ್ಯವರ್ತಕರು) ವ್ಯಾಪಾರ ನಡೆಸುತಿದ್ದರು.

4) ಪೋರ್ಚುಗಾಲದ ಪೋರ್ಚುಗೀಸರು, ಹಾಲೆಂಡದ ಡಚ್ಚರು, ಡೆನ್ಮಾರ್ಕಿನ ಡೇನರು, ಇಂಗ್ಲಾಂಡಿನ ಇಂಗ್ಲಿಷರು, ಫ್ರಾನ್ಸಿನ ಫ್ರೆಂಚರು ವ್ಯಾಪಾರಕ್ಕಾಗಿ ಭಾರತಕ್ಕೆ ಬಂದರು.

5) ಅವರ ಮುಖ್ಯವಾದ ವ್ಯಾಪಾರಮಾರ್ಗ ಜಲದಾರಿ-ಆಫ್ರಿಕವನ್ನು ಬಳಸಿಕೊಂಡಿರುವ ಸಮುದ್ರಮಾರ್ಗವೇ ಐರೋಪ್ಯವರ್ತಕರಿಗೆ ಭಾರತದ ಹೆದ್ದಾರಿಯಾಗಿತ್ತು.

6) ಈ ಜಲಮಾರ್ಗವನ್ನು ಮೊದಲಾಗಿ ಕಂಡುಹಿಡಿದನು ವಾಸ್ಕೋ ಡಗಾಮನೆಂಬ ನಾವಿಕ.

II ಸ್ಥಳಗಳನ್ನು ಹೊಂದಿಸಿ ಬರೆಯಲಾಗಿದೆ

| | | |
|---|---|---|
| 1) | ಕಲ್ಲಿಕೋಟೆ | ಇಂಡಿಯಾ |
| 2) | ವೆನಿಸ್, | ಯುರೋಫ್ ಖಂಡ |
| 3) | ಕಾನ್‌ಸ್ಟಾಂಟನೋಪಲ್ | ತುರ್ಕಿಸ್ಥಾನ |
| 4) | ಸಿಂಧ್ | ಪಾಕಿಸ್ಥಾನ |
| 5) | ಗುಡ್‌ಹೋಫ್‌ಭೂಶಿರ | ಆಫ್ರಿಕಾಖಂಡ |

III 1) ಮಾರ್ಕೋಪೋಲೊ (1254-1324) ಇವನು ಇಟಲಿ ದೇಶದ ನಿಕೊಲೊಪೋಲೋವಿನ ಮಗ ತಂದೆಯೊಡನೆ ಭೂಮಾರ್ಗವಾಗಿ ಪರ್ಶಿಯಾ, ಪಾಮಿರ್ ದಾರಿಯಾಗಿ ಚೀನಾದೇಶಕ್ಕೆ ಹೋಗಿ ಕುಬ್ಲಾಯಿಖಾನನ ಆಸ್ಥಾನವನ್ನು ಸೇರಿದ. ಅಲ್ಲಿ ರಾಜದೂತನಾಗಿ ಕೆಲ (17) ವರ್ಷ ವಿದ್ದು ಅನೇಕ ದೇಶಗಳ ವಿವರಗಳನ್ನು ತಿಳಿದು ಧನಮಾನ ಮರ್ಯಾದೆಗಳೊಡನೆ ಜಾವಾ, ಸಿಂಹಳ, ಪರ್ಶಿಯಾ ಕೊಲ್ಲಿಯಾಗಿ ಹಡಗು ದಾರಿಯಾಗಿ ಹಿಂದೆ ಬಂದನು. ಇವನ ಶೋಧನೆಯು ನೆಲಮಾರ್ಗ ಶೋಧನೆಗೆ ಅನುಕೂಲವಾಯಿತು.

2) ಕೊಲಂಬಸ್‌ನಿಗೆ ಭೂಮಿಯು ಗೋಲಾಕಾರವಾಗಿದೆಯೆಂದು ತಿಳಿದಿತ್ತು. ಆದ್ದರಿಂದ ಭಾರತದ ಶೋಧಕ್ಕಾಗಿ ಪಶ್ಚಿಮ ತೀರದಿಂದಲೇ ಹೊರಟು ಪ್ರವಾಸ ಮಾಡಲು ಯತ್ನಿಸಿದನು. ಆದರೆ ಅವನ ನಾವೆಗಳು ನೈಋತ್ಯ ಗಾಳಿಯ ದೆಸೆಯಿಂದ ದಿಕ್ಕು ಬದಲಾಯಿಸಿ, ಭಾರತಕ್ಕೆ ಬರುವ ಬದಲು ಪಶ್ಚಿಮ ದಿಕ್ಕಿನಲ್ಲಿದ್ದ ಅಮೆರಿಕಾ ಖಂಡದ ವೆಸ್ಟ್ ಇಂಡೀಸ್ (ಸಾಲ್ವಡೋರ್) ದ್ವೀಪಕ್ಕೆ ತಲಪಿದುವು.

3) ಅ) ಇಂಗ್ಲಿಷರ ಪಟ್ಟಣಗಳು-ಬೊಂಬಾಯಿ, ಮದರಾಸ್, ಕಲ್ಕತ್ತೆ, (ಮುಖ್ಯ) ಆ) ಮಾಹೆ, ಕಾರಿಕಲ್, ಪೋಂಡಿಚೇರಿ, ಚಂದ್ರನಗರ, ಯಾನಂ ಇ) ಗೋವಾ, ಡಾಮನ್, ಡಿಯು, ನಗರಹವೇಲಿ.

4) ಯುರೋಪ್ ಖಂಡವು ಭಾರತದ ಪಶ್ಚಿಮ ಕರಾವಳಿಯ ಪಡು ದಿಕ್ಕಿನಲ್ಲಿದೆ. ಅಲ್ಲಿನ ವರ್ತಕರಿಗೆ ತಮ್ಮ ಸರಕುಗಳನ್ನು ಹಡಗುಗಳಲ್ಲಿ ತಂದು ಇಳಿಸುವುದಕ್ಕೂ ಇಲ್ಲಿನ ಸಾಮಾನುಗಳನ್ನು ಕೊಂಡೊಯ್ಯುವುದಕ್ಕೂ ತೀರ ಪಟ್ಟಣಗಳೇ ಅನುಕೂಲ.

ಉ) 1) **ಕೊಲಂಬಸ್‌ನು** (1451-1506) ಜಿನೋವದ ಬಡ ನೇಕಾರನ ಮಗ. ಅಟ್ಲಾಂಟಿಕ್ ಸಾಗರ ದಾಟಿದರೆ ಇಂಡಿಯಾಕ್ಕೆ ಬರಬಹು ದೆಂದೆಣಿಸಿ ಸ್ಪೈನ್ ರಾಣಿಯ ಸಹಾಯ ಪಡೆದು ಪಶ್ಚಿಮಕ್ಕೆ ಪ್ರವಾಸ ಮಾಡಿದ. ಮೂರು ನೌಕೆಗಳಲ್ಲಿ ನಾವಿಕರನ್ನು ಕೂಡಿ ಪ್ರವಾಸ ಮಾಡು ವಾಗ ನೈಋತ್ಯ ಗಾಳಿಯ ದೆಸೆಯಿಂದ ಆ ನಾವೆಗಳು ಪಶ್ಚಿಮಕ್ಕೆ ಸಾಗಿದುವು. ನಾವಿಕರು ದಂಗೆಯೇಳುವ ಸ್ಥಿತಿಯಲ್ಲಿದ್ದರು. ಆದರೂ ಎದೆಗೆಡದೆ ಸಾಗರ ದಾಟಿ ಸಾಲ್ವಡೋರ್ ಮೊದಲಾದ ದ್ವೀಪಗಳನ್ನು ಶೋಧಿಸಿ ಇಂಡಿಯಾ ಎಂದು ಹೆಸರಿಟ್ಟು ಸ್ಪೈನಿನ ಧ್ವಜವನ್ನೂರಿದ. ಅವನ ನಂತರದವರಿಗೆ ಇಂಡಿಯಾ ಅಲ್ಲೆಂದು ತಿಳಿಯಲ್ಪಟ್ಟು ವೆಸ್ಟ್ ಇಂಡೀಸ್ ಎಂದು ಕರೆಯಲ್ಪ ಟ್ಟಿತು.

2) **ವಾಸ್ಕೋಡಗಾಮ**:- ಪೋರ್ಚುಗೀಸ್ ನಾವಿಕ 1497ರಲ್ಲಿ ಹೊರಟು ನಾಲ್ಕು ಹಡಗುಗಳು ಮತ್ತೆ ಕೆಲವು ನಾವಿಕರೊಡನೆ ಗುಡ್‌ಹೋಪ್ ಭೂಶಿರವನ್ನು ಸುತ್ತಿ ಮೊಂಭಾಸಾ ದಾರಿಯಾಗಿ ಕಲ್ಲಿಕೋಟೆಗೆ ಬಂದನು. ಮತ್ತೆ ಅಲ್ಲಿನ ರಾಜ ಜಾಮೊರಿನನ ಸ್ನೇಹ ಬೆಳಸಿ ವಸತಿಗಳನ್ನು ಸ್ಥಾಪಿಸಿ ವ್ಯಾಪಾರ ನಡೆಸಿದನು. ಆ ಮೇಲೆ ಮೂರುಸಾರಿ ಇಂಡಿಯಾಕ್ಕೆ ಬಂದು ಹೋಗಿ ಹೇರ ಳ ಹಣ ಸಂಪಾದಿಸಿದನು. ಇದರಿಂದ ಪೋರ್ಚುಗೀಜರ ಕೀರ್ತಿ ಹೆಚ್ಚಿತು.

3) **ಹೊಂದಿಸಿ ಬರೆಯುವುದು.**

| | |
|---|---|
| ೧) ಮೆಗಲನ್ | ಗುಡ್‌ಹೋಪ್ ಭೂಶಿರ |
| ೨) ಮಾರ್ಕೋಪೋಲೋ | ಗೋವೆಯ ಸಂಸ್ಥಾಪಕ |
| ೩) ಕೊಲಂಬಸ್ | ಫಿಲಿಪೈನ್ಸ್ ದ್ವೀಪಗಳು |
| ೪) ಆಲ್ಬುಕರ್ಕ್ | ಸುಯೇಜ್ ಕಾಲುವೆ |

೫) ಬಾರ್ತಲೋಮ್ಯೋಡಯಾಸ್ ವೆಸ್ಟ್ಇಂಡೀಸ್
೬) ಸರ್ ಥಾಮಸ್ ಚೀನಾಕ್ಕೆ ಹೋದವ
೭) ಕೆಪ್ಟನ್ ಕುಕ್ ಜಹಾಂಗೀರನ ಆಸ್ಥಾನಕ್ಕೆ ಹೋದವ

೧) ಮೆಗಲನ್ - ಫಿಲಿಫೈನ್ಸ್ ದ್ವೀಪಗಳು ೨) ಮಾರ್ಕೋಪೋಲೊ. ಚೀನಾಕ್ಕೆ ಹೋದವ ೩) ಕೊಲಂಬಸ್ - ವೆಸ್ಟ್ಇಂಡೀಸ್ ೪) ಆಲ್ಬುಕರ್ಕ್ - ಗೋವೆಯ ಸ್ಥಾಪಕ ೫) ಬಾರ್ತಲೋಮ್ಯೋಡಯಾಸ್ - ಗುಡ್‌ಹೋಪ್ ಭೂಶಿರ ೬) ಸರ್ ಥಾಮಸ್—ಜಹಂಗೀರ - ಆಸ್ಥಾನಕ್ಕೆ ಹೋದವ (ರಾಯಭಾರಿ)

## ೩) ಭಾರತದಲ್ಲಿ ಯುರೋಪಿಯನ್ ರಾಷ್ಟ್ರಗಳ ಸ್ಪರ್ಧೆ

**ಅ) ದಕ್ಷಿಣ ಭಾರತದಲ್ಲಿ ನವಾಬರೊಳಗಣ ಜಗಳ:-** ಫ್ರೆಂಚ್ ಇಂಗ್ಲೀಷರಲ್ಲಿ ವ್ಯಾಪಾರ ಸ್ಪರ್ಧೆ ನಡೆಯುತ್ತಿದ್ದಾಗ ದಕ್ಷಿಣಾಪಥದಲ್ಲಿ ಹೈದರಾಬಾದ್ ಮತ್ತು ಕರ್ಣಾಟಕದ ನವಾಬರು ಸ್ವತಂತ್ರರಾಗಿ ರಾಜಪಟ್ಟಕ್ಕೋಸ್ಕರ ಕಾದಾಡುತ್ತಿದ್ದರು. ಆ ಪರಿಸ್ಥಿತಿಯನ್ನರಿತು ಕೊಂಡಿದ್ದ ಡ್ಯೂಪ್ಲೆಯೆಂಬ ಫ್ರೆಂಚ್ ಗವರ್ನರನು ಭಾರತದಲ್ಲಿ ಫ್ರೆಂಚ್ ಸಾಮ್ರಾಜ್ಯವನ್ನು ಸ್ಥಾಪಿಸಲು ಯೋಚಿಸುತಿದ್ದ. ಈ ಮಧ್ಯೆ ಆರ್ಕಾಟಿನ ಪಟ್ಟಕ್ಕಾಗಿ ಹವಣಿಸುತಿದ್ದ ಚಂದಾಸಾಹೇಬನ ಪಕ್ಷ ವಹಿಸಿ ಸೈನ್ಯದೊಡನೆ ತಿರುಚಿನಾಪಳ್ಳಿಯನ್ನು ಮುತ್ತುವಂತೆ ಮಾಡಿದ. ಆಗ ಮಹ್ಮದಾಲಿಯು ಇಂಗ್ಲೀಷರ ಸಹಾಯ ಬಯಸಿದನು ಅಷ್ಟರಲ್ಲಿ ಮದ್ರಾಸಿನಲ್ಲಿರುವ ಕಂಪೆನಿಯ ಗುಮಾಸ್ತನಾದ ರಾಬರ್ಟ್ ಕ್ಲೈವನು ಗವರ್ನರರ ಅಪ್ಪಣೆಯಂತೆ ಒಂದು ಚಿಕ್ಕ ಸೈನ್ಯದೊಡನೆ ಆರ್ಕಾಟನ್ನು ಮುತ್ತಿ ವಶಪಡಿಸಿಕೊಂಡನು. ಡ್ಯೂಪ್ಲೆಯು ಇದನ್ನರಿತು ಆರ್ಕಾಟಿಗೆ ಧಾವಿಸಿದರೂ ಸಫಲನಾಗಲಿಲ್ಲ.

**ಫಲಿತಾಂಶ:—** ಮಹ್ಮದಾಲಿಯು ನವಾಬನಾಗಿ ಆರ್ಕಾಟಿನ ಆಡಳಿತೆಯು ಬ್ರಿಟಿಷರ ಹೇಳಿಕೆಯಂತೆ ನಡೆಯುವಂತಾಯಿತು.

**ಬಂಗಾಳದ ರಾಜಕೀಯ ಸ್ಥಿತಿ:—** ಬಂಗಾಳವು ಮೊಗಲರ ಅಧೀನ

ವಾಗಿದ್ದರೂ ಅಲ್ಲಿನ ನವಾಬ ಸಿರಾಜುದ್ದೌಲನು ಸ್ವತಂತ್ರ ರಾಜನಂತಿದ್ದನು ಆಗ ಇಂಗ್ಲೀಷರು ಕಲ್ಕತ್ತೆಯಲ್ಲಿ ಕೋಠಿ ಕಟ್ಟಿಸಿ, ಅದರ ರಕ್ಷಣೆಗೆ ಕೋಟೆ ಕಟ್ಟಿ ಮದ್ದುಗುಂಡುಗಳ ಸಂಗ್ರಹ ಮಾಡಿದ್ದರು. ಇವನ್ನು ತೆಗೆಯ ಬೇಕೆಂದು ನವಾಬನ ಅಪ್ಪಣೆಯಾದರೂ ಇಂಗ್ಲೀಷರು ತೆಗೆಯಲಿಲ್ಲ. ಅದಕ್ಕಾಗಿ ಸಿರಾಜು ದ್ದೌಲನು ಧಾಳಿಮಾಡಿ ಕೋಠಿಯನ್ನು ವಶಪಡಿಸಿದನು. ಇದನ್ನು ಮದ್ರಾಸಿನ ಗವರ್ನರನು ತಿಳಿದು ಕ್ಲೈವನನ್ನು ಸೈನ್ಯಸಮೇತ ಕಲ್ಕತ್ತೆಗೆ ಕಳುಹಿಸಿದ. ಕ್ಲೈವನು ಮೀರಜಾಫರನಿಗೆ ಆಶೆ ತೋರಿಸಿ ಸಹಾಯ ಮಾಡುವಂತೆ ವ್ಯವಸ್ಥೆಗೊಳಿಸಿದ. 1757ರಲ್ಲಿ ಪ್ಲಾಸಿಯೆಂಬಲ್ಲಿ ಯುದ್ಧ ನಡೆಯಿತು.

**ಫಲಿತಾಂಶ:—** ಇಂಗ್ಲೀಷರಿಗೆ ಜಯವಾದುದರಿಂದ ಮೀರ ಜಾಫರ ನವಾಬನಾದನು. ಕ್ಲೈವನು ಇಂಗ್ಲಾಂಡಿಗೆ ಹೋದ ಮೇಲೆ ಮೀರ್‌ಕಾಸಿಮನು ಪಟ್ಟಕ್ಕೆ ಬಂದನು. ತಿರುಗಿ ಮೀರ್‌ಕಾಸಿಮನಿಗೂ ಇಂಗ್ಲೀಷರಿಗೂ ಬಕ್ಸಾರ್‌ನಲ್ಲಿ ಕದನ ನಡೆಯಿತು. ಇದರ ಫಲವಾಗಿ ಬಂಗಾಳದ ಆಡಳಿತವು ಕಂಪೆನಿಯ ವಶಕ್ಕೆ ಬಂತು. ಕ್ಲೈವನು ಬಂಗಾಳದ ಗವರ್ನರನಾದನು.

ಇ) I 1) ಮೊಗಲ್ ಸಾಮ್ರಾಜ್ಯವು ಶಕ್ತಿಗುಂದಿತು, ಚಕ್ರವರ್ತಿಯ ಅಧೀನದಲ್ಲಿದ್ದ ನವಾಬರು ಸ್ವತಂತ್ರರಾಗಲು ಹವಣಿಸುತಿದ್ದರು. ಹಾಗೆ ದಕ್ಷಿಣಭಾರತದಲ್ಲಿಯೂ ರಾಜ ಸಿಂಹಾಸನಕ್ಕಾಗಿ ಅಲ್ಲಲ್ಲಿನ ನವಾಬರೊಳಗೆ ಅಂತ: ಕಲಹವಿತ್ತು. ಈ ಪರಿಸ್ಥಿತಿಯು ಇಂಗ್ಲೀಷರಿಗೂ ಫ್ರೆಂಚರಿಗೂ ತಮ್ಮ ವರ್ಚಸ್ಸನ್ನು ಹೆಚ್ಚಿಸಲು ಅನುಕೂಲವಾಯಿತು.

2) ಡ್ಯೂಪ್ಲೆಯು ಫ್ರೆಂಚರ ವಶವಿದ್ದ ಪ್ರದೇಶಗಳನ್ನು ನೋಡಿಕೊಳ್ಳುವುದಕ್ಕಾಗಿ ನಿಯಮಿಸಲ್ಪಟ್ಟ ಪಾಂಡಿಚೇರಿಯ ಗವರ್ನರ್. ಭಾರತದಲ್ಲಿ ಫ್ರೆಂಚ್ ಸಾಮ್ರಾಜ್ಯವನ್ನು ಸ್ಥಾಪಿಸಬೇಕೆಂಬುದೇ ಅವನಾಶೆ. ಆದರೆ ಕ್ಲೈವನ ನೇತೃತ್ವದಲ್ಲಿ ನಡೆದ ಯುದ್ಧಗಳಲ್ಲಿ ಇಂಗ್ಲೀಷರೇ ವಿಜಯಿಗಳಾದರು. ಡ್ಯೂಪ್ಲೆಯು ಸಫಲನಾಗಲಿಲ್ಲ. ಫ್ರೆಂಚ್ ಸರಕಾರದ ಸಹಾಯವೂ ಸಕಾಲಕ್ಕೆ ಸಿಗದ ಕಾರಣ ಅವನಾಶೆ ನೆರವೇರದೇ ಹೋಯಿತು.

3) ಕ್ಲೈವನು ಮದ್ರಾಸಿನಲ್ಲಿದ್ದ ಈಸ್ಟ್ ಇಂಡಿಯಾ ಕಂಪೆನಿಯ ಒಬ್ಬ ಗುಮಾಸ್ತ. ಆ ಮೇಲೆ ಒಬ್ಬ ಸೈನಿಕ. 2) ಆರ್ಕಾಟಿನ ಸಿಂಹಾಸನ

ಕ್ಕಾಗಿ ಮಹ್ಮದಾಲಿಗೂ ಚಂದಾಸಾಹೇಬನಿಗೂ ಕಲಹವೆದ್ದಾಗ ಡ್ಯೂಪ್ಲೆಯು ಚಂದಾಸಾಹೇಬನ ಪಕ್ಷ ವಹಿಸಿ ಮಹ್ಮದಾಲಿಯಿದ್ದ ತಿರುಚಿನಾಪಳ್ಳಿಗೆ ಮುತ್ತಿಗೆ ಹಾಕಿದ್ದ. ಆಗ ಮಹ್ಮದಾಲಿಯು ಇಂಗ್ಲೀಷರ ಸಹಾಯ ಕೋರಿದುದರಿಂದ ಕ್ಲೈವನು ಆರ್ಕಾಟಿನ ರಾಜಕೀಯದಲ್ಲಿ ಪ್ರವೇಶಿಸಿದನು. 3) ಹಾಗೆ ಗವರ್ನರರ ಅನುಮತಿ ಪಡೆದು ಸೈನ್ಯಸಮೇತ ಹೋಗಿ ಆರ್ಕಾಟನ್ನು ವಶಪಡಿಸಿಕೊಂಡನು. ಡ್ಯೂಪ್ಲೆಯು ತಿರುಚಿರಪಳ್ಳಿಯಿಂದ ಚದರಲು ಮಹ್ಮದಾಲಿಯನ್ನೇ ಕರತಂದು ಆರ್ಕಾಟಿನ ನವಾಬನನ್ನಾಗಿ ಮಾಡಿದನು. ಇದರಿಂದ ಫ್ರೆಂಚರು ನಿರ್ಬಲರಾಗಿ ಇಂಗ್ಲೀಷರ ಪ್ರಭಾವ ಹೆಚ್ಚಿತು.

4) **ಈ ಕದನ ಬಂಗಾಳದ ನವಾಬ ಸಿರಾಜುದ್ದೌಲ** ಹಾಗೂ ಇಂಗ್ಲೀಷ (ಕ್ಲೈವ) ರೊಳಗೆ ನಡೆಯಿತು. ಕಾರಣ ಇಂಗ್ಲೀಷರು ಕಲ್ಕತ್ತೆಯಲ್ಲಿ ಕೋಠಿಯನ್ನು ಸ್ಥಾಪಿಸಿ ಅದರ ರಕ್ಷಣೆಗೆ ಕೋಟೆ ಕಟ್ಟಿ ಮದ್ದುಗುಂಡುಗಳನ್ನು ಶೇಖರಿಸಿದ್ದರು. ಅವನ್ನು ತೆಗೆಯುವಂತೆ ಅಪ್ಪಣೆ ಕೊಟ್ಟರೂ ಇಂಗ್ಲೀಷರು ಕೇಳಲಿಲ್ಲ. ಅದಕ್ಕಾಗಿ ನವಾಬನು ಧಾಳಿಮಾಡಿ ಕೋಠಿಯನ್ನು ವಶಪಡಿಸಿದ. ಹೀಗಾಗಿ ಯುದ್ಧ ನಡೆಯಿತು. ಫಲಿತಾಂಶ:- ಇಂಗ್ಲೀಷರಿಗೆ ಜಯ. ಸಿರಾಜುದ್ದೌಲನಿಗೆ ಕಾರಾಗೃಹವಾಸ. ಮೀರಜಾಫರನು ನವಾಬನಾದನು. 24 ಪರಗಣೆಗಳು ಇಂಗ್ಲೀಷರಿಗೆ ದೊರೆತವು.

II 1 ಅ) ರಾಬರ್ಟ್ ಕ್ಲೈವನು ತಂತ್ರದಿಂದ ಆರ್ಕಾಟನ್ನು ವಶಪಡಿಸಿಕೊಂಡನು. 2 ಆ) ಇಂಗ್ಲೀಷರು ಅವನ (ಸಿರಾಜುದ್ದೌಲನ) ಪ್ರತಿಸ್ಪರ್ಧಿಗಳ ಪಕ್ಷ ವಹಿಸಿದ್ದರು. 3 ಇ) ಸಿರಾಜುದ್ದೌಲನ ಸೇನಾಪತಿಯು ನವಾಬಗಿರಿಯ ಆಶೆಯಿಂದ ರಾಬರ್ಟ್‌ಕ್ಲೈವನಿಗೆ ಸಹಾಯ ಮಾಡಿದನು.

**ಉ)** 1) ಬಕ್ಸಾರು ಯುದ್ಧದ ಕಾರಣ ಫಲಿತಾಂಶ ಗಳೇನು?

ಈ ಯುದ್ಧ ಮೀರಕಾಸಿಮನಿಗೂ ಇಂಗ್ಲೀಷರಿಗೂ ನಡೆಯಿತು. ಕಾರಣ ಮೀರಕಾಸಿಮನು ನವಾಬನಾದ ಹೆಮ್ಮೆಯಿಂದ ಇಂಗ್ಲೀಷರೊಡನೆ ಜಗಳ ಹೂಡಿ ಸೋತು ಹೋಗಿದ್ದ. ಈ ಸೇಡು ತೀರಿಸುವುದಕ್ಕಾಗಿ ಅಯೋಧ್ಯಾ ನವಾಬನನ್ನೂ ಮೊಗಲ್ ಭಾದಷಹ ಷಾಆಲಮನನ್ನೂ ಕೂಡಿಕೊಂಡು ಯುದ್ಧ ಹೂಡಿದ. **ಫಲಿತಾಂಶಗಳು:-** ಮೀರ್ ಕಾಸಿಮನ ಪಲಾಯನ

ಮೀರಜಾಫರನಿಗೆ ನವಾಬ ಪಟ್ಟ. ಅಲ್ಲಹಾಬಾದ್ ಒಪ್ಪಂದವಾಗಿ ಬಂಗಾಳ, ಬಿಹಾರ್ ಪ್ರಾಂತಗಳ ದಿವಾನಿ ಹಕ್ಕು ಇಂಗ್ಲೀಷರಿಗೆ ದೊರಕಿತು. ಇದೇ ಭಾರತದಲ್ಲಿ ಬ್ರಿಟಿಷ್ ಸಾಮ್ರಾಜ್ಯದ ತಳಹದಿ.

2) ಕ್ಲೈವನು ನಡೆಸಿದ ಸಾಹಸಗಳು:— ಮೊದಲು ಗುಮಾಸ್ತನಾದರೂ ಮತ್ತೆ ಸೈನಿಕನಾದನು. ಡ್ಯೂಪ್ಲೆ ಚಂದಾಸಾಹೇಬನ ಪಕ್ಷ ವಹಿಸಿ ತಿರ್ರುಚಿರ ಪಳ್ಳಿಯನ್ನು ಮುತ್ತಿದಾಗ ಆರ್ಕಾಟನ್ನು ವಶಪಡಿಸಿ ಮಹ್ಮದಾಲಿಯನ್ನು ಪಟ್ಟಕ್ಕೇರಿಸಿದನು. ಬಂಗಾಳದಲ್ಲಿ ಪ್ಲಾಸಿಕದನ, ಬಕ್ಸಾರ್ ಕದನಗಳಲ್ಲಿ ಜಯಶಾಲಿಯಾಗಿ ಕೆಲವು ಜಿಲ್ಲೆಗಳನ್ನು ದೊರಕಿಸಿಕೊಂಡು ಬ್ರಿಟಿಷ್ ಸಾಮ್ರಾಜ್ಯಕ್ಕೆ ಅಡಿಗಲ್ಲು ಹಾಕಿದನು. ಉತ್ತರ ಸರಕಾರ ಜಿಲ್ಲೆಗಳನ್ನು ಗೆದ್ದು ಫ್ರೆಂಚ್‌ರ ಶಕ್ತಿಯನ್ನೇ ಮುರಿದನು. ಅಲ್ಲಹಾಬಾದ್ ಒಪ್ಪಂದದ ಮೂಲಕ ದಿವಾನಿ ಹಕ್ಕನ್ನು ಕಂಪನಿಗಾಗಿ ಒದಗಿಸಿ ಕೊಟ್ಟನು. ಆ ಮೇಲೆ ನವಾಬನೂ ಕಂಪನಿಯೂ ಕೂಡಿ ನಡೆಸುವ ದ್ವಿದಳ ರಾಜ್ಯಪದ್ಧತಿಯನ್ನು ಬಂಗಾಳದಲ್ಲಿ ಸ್ಥಾಪಿಸಿ ಲಾರ್ಡ್ ಎಂಬ ಬಿರುದು ಪಡೆದು ಕೀರ್ತಿ ಶೇಷನಾದನು.

3) **ಬ್ರಿಟಿಷರು ಯಾವ ಕಾರಣಗಳಿಂದ** ಭಾರತದಲ್ಲಿ ಸಾಮ್ರಾಜ್ಯ ಸ್ಥಾಪಿಸಿದರು? 1) **ಪೋರ್ಚುಗೀಜರು** ಧರ್ಮಾಂಧರು ವಿಲಾಸಿಗಳು ಜನಧನ ಬಲಸಾಕಷ್ಟಿರಲಿಲ್ಲ. ದೇಶ ಚಿಕ್ಕದು, ಆಲ್ಬುಕರ್ಕ್‌ನಂತಹ ಸಮರ್ಥರು ಮತ್ತೆ ಒರಲಿಲ್ಲ. 2) **ಡಚ್ಚರು** ಚಿಕ್ಕ ದೇಶವರ, ಪೋರ್ಚುಗೀಜರೊಡನೆ ಹೋರಾಡಿ ದಣಿದು ಹೋದರು; ಪೂರ್ವ ದೇಶಗಳ ವ್ಯಾಪಾರವನ್ನು ಕೇಂದ್ರೀಕರಿಸಿ ಭಾರತದ ವಸಾಹತುಗಳ ಆಶೆಬಿಟ್ಟರು. 3) **ಫ್ರೆಂಚರು:**- ಡಚ್ಚರಷ್ಟು ಸಾಹಸಿಗಳಲ್ಲ. ವರ್ತಕರ ಬೆಂಬಲವಿಲ್ಲದೆ ಸರಕಾರವನ್ನೇ ಆಧರಿಸಿ ವ್ಯಾಪಾರ ನಡೆಸಿದರು. ಯುದ್ಧಕಾಲದಲ್ಲಿ ಒಕ್ಕಟ್ಟರಲಿಲ್ಲ. ಆರ್ಥಿಕ ಬಿಕ್ಕಟ್ಟಿನಿಂದ ಹೋರಾಡಿ ಸೋತು ಹೋದರು. 4) **ಇಂಗ್ಲೀಷರು** ಸಮರ್ಥರು, ಸ್ವತಂತ್ರವರ್ತಕರು, ಬಲಿಷ್ಠವಾದ ನೌಕಾಬಲ, ಸರಕಾರದ ಬಲ ಎಲ್ಲಾ ಇದ್ದುದರಿಂದ ಯುದ್ಧಗಳಲ್ಲಿ ಜಯಶೀಲರಾದರು. ಮೊಗಲ ಸಾಮ್ರಾಜ್ಯವೂ ಕುಸಿದು ಹೋಗಿತ್ತು. ದೇಶೀರಾಜರೊಳಗೆ ಒಕ್ಕಟ್ಟರಲಿಲ್ಲ. ಹೀಗಾಗಿ ಒಂದೊಂದೇ ರಾಜ್ಯ ಹಿಡಿದು ಸಾಮ್ರಾಜ್ಯ ಸ್ಥಾಪಿಸಿದರು.

4) ಬಿಟ್ಟ ಶಬ್ದಗಳನ್ನು ತುಂಬಿಸಿರಿ:- ಭಾರತದಲ್ಲಿ ಪೋರ್ಚುಗೀಸರ ಮೊದಲನೆಯ ಸ್ಪರ್ಧಿಗಳು 2) ಯುದ್ಧವು ಬ್ರಿಟಿಷರಾಳ್ವಿಕೆಗೆ ಅಸ್ತಿವಾರ 3) ಐರೋಪ್ಯರು ಭಾರತಕ್ಕೆ ಜಲಮಾರ್ಗವನ್ನು ಕಂಡುಹಿಡಿಯಲು ಕಾರಣ — 4) ಜಲಮಾರ್ಗ ಶೋಧನೆಗೆ ಪ್ರೋತ್ಸಾಹಿಸಿದ ದೇಶಗಳು — —

1) ಡಚ್ಚರು 2) ಪ್ಲಾಸಿ 3) ಕಾನ್‌ಸ್ಟಾಂಟಿನೋಪಲ್ ಟರ್ಕಿಯವರ ವಶವಾಗಿತ್ತು 4) ಸ್ಪೈನ್, ಪೋರ್ಚುಗಲ್

5) ಜತೆಗೂಡಿಸಿರಿ:—

| | | | |
|---|---|---|---|
| 1) | 1453 | ಈಸ್ಟ್ ಇಂಡಿಯಾ ಕಂಪನಿ ಸ್ಥಾಪನೆ. | 4) |
| 2) | 1764 | ಆರ್ಕಾಟಿನ ಮುತ್ತಿಗೆ | 5) |
| 3। | 1510 | ಕಾನ್‌ಸ್ಟಾಂಟಿನೋಪಲ್ ಪತನ | 1) |
| 4) | 1600 | ಬಕ್ಸಾರು ಯುದ್ಧ | 2) |
| 5) | 1751 | ಕಂಪನಿಗೆ ದಿವಾನಿಹಕ್ಕು | 6) |
| 6) | 1765 | ಗೋವೆಯಲ್ಲಿ ಪೋರ್ಚುಗೀಜರು | 3) |

## 4 ಭಾರತದಲ್ಲಿ ಬ್ರಿಟಿಷರ ಅಧಿಪತ್ಯದ ಬೆಳವಣಿಗೆ

ಅ) ಭಾರತದಲ್ಲಿ ಕೆಲವು ಭಾಗಗಳಲ್ಲಿ ಆಡಳಿತಕ್ಕೆಳಿವ ಮೇಲೆ ಕಂಪೆನಿಯಧಿಕಾರಿಗಳು ಜನರನ್ನು ಸುಲಿಗೆ ಮಾಡತೊಡಗಿದರು. ಈ ಸಂಗತಿಯನ್ನು ಡೈರೆಕ್ಟರರು ತಿಳಿದು ವಾರನ್ ಹೇಸ್ಟಿಂಗ್ಸ್‌ನನ್ನು ಬಂಗಾಳದ ಗವರ್ನರನನ್ನಾಗಿ ನೇಮಿಸಿದರು.

ವಾರನ್ ಹೇಸ್ಟಿಂಗ್ಸ್‌ನು ದಕ್ಷ ಆಡಳಿತಗಾರನಾಗಿ ಕೆಲವು ಭಾಗಗಳನ್ನು ವಶಪಡಿಸಿಕೊಂಡನು. ಹೀಗೆ ಕಂಪನಿ ರಾಜ್ಯವು ವಿಸ್ತಾರವಾಗುವುದನ್ನು ಕಂಡು ಬ್ರಿಟಿಷ್‌ಪಾರ್ಲಿಮೆಂಟ್ ರೆಗ್ಯುಲೇಟಿಂಗ್ ಆಕ್ಟನ್ನು ಜ್ಯಾರಿಮಾಡಿ ಆಡಳಿತವನ್ನು ಹತೋಟಿಗೆ ತಂದಿತು. ಈ ಆಕ್ಟಪ್ರಕಾರ ವಾರನ್‌ಹೇಸ್ಟಿಂಗ್ಸ್‌ನು ಗವರ್ನರ್ ಜನರಲ್ ಆದನು. ಇವನು ಪ್ರಾಮಾಣಿಕನಾದುದರಿಂದ ನಾನಾವಿಧವಾಗಿ ಹಣ ಕೂಡಿಸಿ ಕಂಪನಿಯ ಸಂಪತ್ತನ್ನು

ವೃದ್ಧಿಗೊಳಿಸಿದನು. ಇವನ ನಂತರ 20 ಮಂದಿ ಗವರ್ನರ್ ಜನರಲ್ ಆಗಿ 1857ರ ವೇಳೆಗೆ ಕಂಪನಿಯಾಡಳಿತವು ಭಾರತದಲ್ಲೆಲ್ಲ ವಿಸ್ತಾರವಾಯಿತು. ಅವರಲ್ಲಿ ಕಾರ್ನ್‌ವಾಲಿಸ್‌ನು 1) ಮೈಸೂರಿನ ಟಿಪ್ಪುವನ್ನು ಸೋಲಿಸಿ ಬ್ರಿಟಿಷರೊಡನೆ ಕರಾರು ಮಾಡಿಕೊಳ್ಳುವಂತೆ ಏರ್ಪಡಿಸಿದ 2) ಬಂಗಾಳ ದಲ್ಲಿ ಖಾಯಂ ಕಂದಾಯ ಪದ್ಧತಿಯನ್ನು ಜಾರಿಗೆ ತಂದನು. ಭಾರತವು ಸ್ವತಂತ್ರವಾದ ಮೇಲೆ ಈ ಪದ್ಧತಿಯನ್ನಳಿಸುವುದಕ್ಕಾಗಿ ಭೂಮಾಸೂಧಯು ಜಾರಿಯಾಗುತ್ತಲಿದೆ.

ಲಾರ್ಡ್‌ವೆಲ್ಲೆಸ್ಲಿಯು ಸೈನ್ಯಸಹಾಯಕ ಪದ್ಧತಿಯನ್ನು ಜಾರಿ ಮಾಡಿ ದನು. ಆದರೆ ಇದನ್ನು ಕೆಲವು ರಾಜರು ನಿರಾಕರಿಸಿದರು. ಈ ನಿಮಿತ್ತ ವಾಗಿ ಬ್ರಿಟಿಷರಿಗೂ ಟಿಪ್ಪುವಿಗೂ ನಾಲ್ಕನೆ ಮೈಸೂರ್ ಯುದ್ಧ ನಡೆಯಿತು. ನಿಜಾಮರೂ ಮರಾಠರೂ ಬ್ರಿಟಿಷರಿಗೆ ಸಹಾಯ ಕೊಟ್ಟರು. ಅದಕ್ಕಾಗಿ ಬ್ರಿಟಿಷರು ಮೈಸೂರಿನ ಕೆಲವು ಭಾಗವನ್ನಿಟ್ಟುಕೊಂಡು, ಸ್ವಲ್ಪ ಭಾಗವನ್ನು ನಿಜಾಮನಿಗೆ ಬಿಟ್ಟುಕೊಟ್ಟು ಉಳಿದ ಭಾಗವನು ಯದುವಂಶದ ಅರಸನಿಗೆ ಕೊಟ್ಟು ಸೈನ್ಯ ಸಹಾಯಕ ಯೋಜನೆಗೆ ಒಪ್ಪುವಂತೆ ಮಾಡಿದರು.

ಲಾರ್ಡ್‌ಹೇಸ್ಟಿಂಗ್ಸ್‌ನ ಕಾಲದಲ್ಲಿ 1) ಜನರಿಗೆ ತೊಂದರೆ ಕೊಡುತಿದ್ದ ಪಿಂಡಾರಿಗಳೆಂಬ ಲೂಟಿಗಾರರನ್ನಣಗಿಸಿದನು 2) ಮರಾಠ ಸರದಾರರಲ್ಲಿ ಒಬ್ಬೊಬ್ಬರನ್ನೇ ಸೋಲಿಸಿ, ಅವರ ರಾಜ್ಯಗಳನ್ನು ಬ್ರಿಟಿಷ ರಾಡಳಿತೆಗೆ ಸೇರಿಸಿದನು 3) ರಜಪೂತರಾಜರೊಡನೆ ಒಪ್ಪಂದಮಾಡಿ ಬ್ರಿಟಿಷರಾಡಳಿತೆಗೆ ಒಳಪಡುವಂತೆ ಮಾಡಿದನು. 4) ಬೊಂಬಾಯಿ, ಮದರಾಸುಗಳಲ್ಲಿ ರೈತವಾರಿ ಪದ್ಧತಿಯನ್ನಾರಂಭಿಸಿದನು. ಮಂತ್ರಿ ವಿಲಿಯಂ ಬೆಂಟಿಂಕನು ಹಲವು ಸುಧಾರಣೆಗಳನ್ನು ಕೈಗೊಂಡನು.

ಲಾರ್ಡ್‌ಡಾಲ್‌ಹೌಸಿಯು ಬ್ರಿಟಿಷ್ ಚಕ್ರಾಧಿಪತ್ಯವು ಭಾರತದಲ್ಲಿ ಅಖಂಡವಾಗಿರಬೇಕೆಂಬ ಹಿರಿದಾಶೆಯಿಂದ ದೇಶೀರಾಜರ ಮೇಲೆ ಕೆಲವು ನಿಯಮಗಳನ್ನು ಹಾಕಿದನು. ಈ ಕಾಲದಲ್ಲಿ ಮೊಟ್ಟಮೊದಲಿನ ರೈಲುದಾರಿ ಗಳು ಹಾಕಲ್ಪಟ್ಟವೆ. ತಂತಿಟಪಾಲುಗಳು ಆರಂಭವಾಗಿವೆ.

ಪರಿಣಾಮ ಡಾಲ್‌ಗಾಸಿಯ ಧೋರಣೆಗಳಿಂದ ರಾಜ ಪ್ರಜೆಗಳಿಗೆ ಅಶಾಂತಿ ಯುಂಟಾಯಿತು. ಭಾರತೀಯರಲ್ಲಿ ದ್ವೇಷಭಾವನೆ ಜಾಗ್ರತವಾಗಿ ಬ್ರಿಟಿಷ್

ಪ್ರಭುತ್ವವನ್ನು ಕೊನೆಗೊಳಿಸಬೇಕೆಂಬ ಬಯಕೆಯೂ ತೀವ್ರವಾಯಿತು.

ಇ) I 1) ಈಸ್ಟ್ ಇಂಡಿಯಾ ಕಂಪನಿಯು ಕೆಲವು ಭಾಗಗಳಲ್ಲಿ ಆಡಳಿತ ವನ್ನು ಸ್ಥಾಪಿಸಿದ ಮೇಲೆ ಕಂಪನಿಯ ನೌಕರರು ಅಧಿಕಾರಿಗಳಾಗಿ ಜನರನ್ನು ಸುಲಿಗೆ ಮಾಡತೊಡಗಿದರು. ಇದು ಇಂಗ್ಲಾಂಡಿನಲ್ಲಿದ್ದ ಕಂಪನಿಯ ಡೈರೆಕ್ಟ ರರಿಗೆ ತಿಳಿಯಿತು. ಆಡಳಿತವನ್ನು ಉತ್ತಮಗೊಳಿಸುವುದಕ್ಕಾಗಿ ವಾರನ್ ಹೇಸ್ಟಿಂಗ್ಸ್‌ನನ್ನು ಗವರ್ನರ್ ಜನರಲ್‌ನನ್ನಾಗಿ ನೇಮಿಸಿದರು. ಇವನು ಘನ ವಿದ್ಯಾವಂತ. ಆಡಳಿತೆಯಲ್ಲಿ ದಕ್ಷನೂ ಪ್ರಾಮಾಣಿಕನೂ ಆಗಿದ್ದ.

ವಾರನ್ ಹೇಸ್ಟಿಂಗ್ಸ್‌ನ ಯೋಗ್ಯ ಆಡಳಿತದಿಂದ ಕೆಲವು ಪ್ರದೇಶಗಳು ಕಂಪನಿಯಾಳ್ವಿಕೆಗೆ ಒಳಪಟ್ಟವು. ಹೀಗೆ ರಾಜ್ಯವು ವಿಸ್ತಾರವಾಗುತ್ತ ಬಂತು. ಆಗ ಕೋಟ್ಯಂತರ ಜನರುಳ್ಳ ರಾಜ್ಯದಾಡಳಿತವನ್ನು ಹತೋಟಿಗೆ ತರುವುದು. ಬ್ರಿಟಿಷ್ ಸರಕಾರಕ್ಕೆ ಅಗತ್ಯವೆನಿಸಿತು. ಅದ್ದರಿಂದ ಬ್ರಿಟಿಷ್ ಪಾರ್ಲಿ ಮೆಂಟ್ 1773ರಲ್ಲಿ ಒಂದು ಆಕ್ಟ್‌ನ್ನು ಜಾರಿಗೆ ತಂದಿತು. ಇದರಿಂದ ಆಡಳಿತದಲ್ಲಾದ ಬದಲಾವಣೆಗಳು.

1) ಬಂಗಾಳದ ಗವರ್ನರನೇ ಗವರ್ನರ್ ಜನರಲ್ 2) ಇವನು ಕಂಪನಿಯಾಡಳಿತದ ವಿಷಯದಲ್ಲಿ ಬ್ರಿಟಿಷ್ ಪಾರ್ಲಿಮೆಂಟಿಗೆ ಹೊಣೆಗಾರ ನಾದನು 3) ಅವನ ಸಹಾಯಕ್ಕೆ ನಾಲ್ಕು ಮಂದಿ ಸದಸ್ಯರುಳ್ಳ ಮಂತ್ರಾ ಲೋಚನಾ ಸಭೆಯು ನ್ನೇಮಿಸಲ್ಪಟ್ಟಿತು. 4) ಮದ್ರಾಸ್, ಬೊಂಬಾಯಿ ಗವರ್ನರರು ಗವರ್ನರ್ ಜನರಲ್‌ನ ಅಧೀನದಲ್ಲಿರುವಂತೆ ಏರ್ಪಾಡಾಯಿತು. 5) ನ್ಯಾಯಪಾಲನೆಗೆ ಕಲ್ಕತ್ತೆಯಲ್ಲೊಂದು ಸುಪ್ರಿಂಕೋರ್ಟು ಸ್ಥಾಪಿತ ವಾಯಿತು.

3) ಹಿಂದೂ ದೇಶದ ಅರಸರು ಬ್ರಿಟಿಷ್ ಸಾರ್ವಭೌಮತ್ವವನ್ನೊಪ್ಪಿ ಕೊಂಡು ತಮ್ಮ ರಾಜ್ಯಗಳ ಶಾಂತಿ ರಕ್ಷಣೆಗಾಗಿ ಬ್ರಿಟಿಷ್ ಸೈನ್ಯವನ್ನು ಒಬ್ಬ ರೆಸಿಡೆಂಟನನ್ನು ಇಟ್ಟುಕೊಳ್ಳಬೇಕು. ಅವರ ವೆಚ್ಚಕ್ಕೆ ನಿಗದಿಯಾದಷ್ಟು ಹಣ ಪ್ರತಿ ವರ್ಷವೂ ಸಂದಾಯ ಮಾಡಬೇಕು. ಈ ಯೋಜನೆಗೆ ಸೇರಿದ ರಾಜರು ಇತರ ರಾಜರೊಡನೆ ಯುದ್ಧ ಸಂಧಾನ ನಡೆಸಕೂಡದು. ಈ ನಿಯಮಕ್ಕೊಳಪಟ್ಟು ಬ್ರಿಟಿಷರ ಮಾಂಡಲಿಕತ್ವವನ್ನು ಒಪ್ಪಿಕೊಂಡು ತಾವಾಗಿ ಮಾಡಿಕೊಂಡ ಒಪ್ಪಂದಕ್ಕೆ ಸಹಾಯಕ ಸೈನ್ಯ ಒಪ್ಪಂದವೆನ್ನುವರು. ಇದಕ್ಕೆ

ಕೆಲವು ರಾಜರು ಒಪ್ಪಿಕೊಂಡರು. ಕಾರಣ ಅವರಿಗೆ ಕೆಲವು ರಾಜರ ಭಯ ವಿತ್ತು. ಬ್ರಿಟಿಷರ ಹಿಡಿತಕ್ಕೆ ಸಿಕ್ಕಿಬಿದ್ದು, ತಮ್ಮ ಸ್ವಾತಂತ್ರ್ಯ ನಷ್ಟವಾಗುವು ದೆಂದಾದರೂ ಲಕ್ಷಿಸಲಿಲ್ಲ.

II 1) ವಾರನ್ ಹೇಸ್ಟಿಂಗ್ಸ್ ಉ) ಕಂಪನಿಯಾಡಳಿತವನ್ನು ಬಹು ಮಟ್ಟಿಗೆ ಉತ್ತಮ ಪಡಿಸಿದನು. 2) ಲಾರ್ಡ್‌ಕಾರ್ನ್‌ವಾಲಿಸ್ ಈ) ಬಂಗಾಳದಲ್ಲಿ ಖಾಯಂ ಜಮೀನ್ದಾರಿ ಪದ್ಧತಿಯನ್ನು ಜಾರಿಗೆ ತಂದನು. 3) ಲಾರ್ಡ್‌ವೆಲ್ಲೆಸ್ಲಿ ಅ) ಸಹಾಯಕ ಸೈನ್ಯ ಒಪ್ಪಂದವನ್ನು ಜಾರಿಗೆ ತಂದನು. 4) ಲಾರ್ಡ್‌ಹೇಸ್ಟಿಂಗ್ಸ್ ಊ) ಪಿಂಡಾರಿಯವರನ್ನು ಅಡ ಗಿಸಿದನು. 5) ಲಾರ್ಡ್‌ಬೆಂಟಿಂಕ್ ಇ) ಸಹಗಮನ ಪದ್ಧತಿಯನ್ನು ನಿಲ್ಲಿಸಿದನು. 6) ಲಾರ್ಡ್‌ಡಾಲ್ ಹೌಸಿ ಆ) ರಾಜರು ದತ್ತುಪುತ್ರರನ್ನು ತೆಗೆದು ಕೊಳ್ಳಕೂಡದೆಂಬ ನಿಯಮವನ್ನು ಹಾಕಿದನು.

| | | | | |
|---|---|---|---|---|
| III 1) | ಕ್ರಿ. ಶ. | 1773–1784 | ವಾರನ್ | ಹೇಸ್ಟಿಂಗ್ಸ್ |
| 2) | ,, | 1785—1793 | ಲಾರ್ಡ್ | ಕಾರ್ನ್‌ವಾಲಿಸ್ |
| 3) | ,, | 1798—1805 | ,, | ವೆಲ್ಲೆಸ್ಲಿ |
| 4) | ,, | 1813—1823 | ,, | ಹೇಸ್ಟಿಂಗ್ಸ್ |
| 5) | ,, | 1828—1835 | ,, | ವಿಲಿಯಾಂ ಬೆಂಟಿಂಕ್ |
| 6) | ,, | 1848—1856 | ,, | ಡಾಲ್ ಹೌಸಿ |

ಉ) 1) ಲಾರ್ಡ್‌ವಿಲಿಯಂಬೆಂಟಿಂಕ್ 2) ಲಾರ್ಡ್‌ಹೌಸಿ ಇವರ ಕಾಲದಲ್ಲಾದ ಸುಧಾರಣೆಗಳೇನು?

1) ಸತಿಸಹಗಮನ ಪದ್ಧತಿಯ ನಿಷೇಧ, ಸಾವಿರಾರು ಠಕ್ಕರನ್ನಡ ಗಿಸಿದ್ದು, ದೇಶಭಾಷೆಗಳಿಗೆ ಪ್ರೋತ್ಸಾಹ ಕೊಟ್ಟು ಇಂಗ್ಲೀಷು ವಿದ್ಯೆಯನ್ನಾರಂ ಭಿಸಿದ್ದು. ತರಬೇತಾದ ಭಾರತೀಯರಿಗೆ ದೊಡ್ಡ ಹುದ್ದೆಗಳನ್ನು ಕೊಟ್ಟುದು ರಾಜಕೀಯದಲ್ಲಿ ಮೈಸೂರಿನ ಆಕ್ರಮಣ, ಕೊಡಗಿಗೆ ಚೀಫ್ ಕಮಿಶನರ ನೇಮಕ.

2) ರಾಜಕೀಯ (ದೇಶಾಭಿವೃದ್ಧಿ) ಕಾರ್ಯದಲ್ಲಿ, ದೇಶಹಿ

(ಸಾಮಾಜಿಕ) ಕಾರ್ಯದಲ್ಲಿ ಪ್ರಸಿದ್ಧ. ರಾಜಕೀಯ 1) ನಿಸ್ಸಂತತಿ ರಾಜರ ರಾಜ್ಯಾಪಹಾರ ತತ್ವದ ಮೂಲಕ ಝೂನ್ಸಿ, ನಾಗಪುರ ಸತಾರಾ, ಜಯಪುರ ಮೊದಲಾದ ರಾಜ್ಯಗಳ ಆಕ್ರಮಣ. 2) ಆಡಳಿತವು ಅಸಮರ್ಪಕವೆಂಬ ನೆವನವೊಡ್ಡಿ ಅಯೋಧ್ಯೆ ಮೊದಲಾದ ರಾಜ್ಯಾಪಹಾರ. 3) ಒಪ್ಪಂದದ ಮೂಲಕ ಬೀಹಾರು ಸ್ವಾಧೀನ 4) ಯುದ್ಧದ ಮೂಲಕ ಪಂಜಾಬು, ಕೆಳಬರ್ಮಾ ಮೊದಲಾದ ಪ್ರದೇಶಗಳನ್ನು ಹಿಡಿದು ರಾಜ್ಯ ವಿಸ್ತರಣೆಯ ಕಾರ್ಯ ಪೂರ್ಣಗೊಳಿಸಿದ್ದು

**ದೇಶ ಹಿತಕಾರ್ಯಗಳು—** ಅಂಚೆ ತಂತಿಗಳ ಆರಂಭ, ರೈಲ್ವೆ ಮಾರ್ಗಗಳ ನಿರ್ಮಾಣ, ಲೋಕೋಪಯೋಗಿಖಾತೆಗಳ ಏರ್ಪಾಡು. ಹಲವು ಪ್ರೌಢಶಾಲೆಗಳು ಪ್ರಾಥಮಿಕ ಶಾಲೆಗಳ ಸ್ಥಾಪನೆ, ಕೆಲವು ಕಾಲುವೆಗಳೂ ನಿರ್ಮಿಸಲ್ಪಟ್ಟವು.

2) **ಬಿಟ್ಟಶಬ್ದಗಳು ಆವರಣದೊಳಗಿವೆ.**

1) ಸತಿಸಹಗಮನ ನಿಷೇಧಕ್ಕೆ ಪ್ರೋತ್ಸಾಹಿಸಿದವನು—ರಾಜಾರಾಮಮೋಹನ ರಾವ್ 2) ಆರಂಭದಲ್ಲಿ—ದಿಂದ— ವರೆಗೆ ರೈಲ್ವೆ ದಾರಿ ಹಾಕಲಾಯಿತು (ಥಾನಾ, ಬೊಂಬಾಯಿ) 3) —ನು ಜಿಲ್ಲೆಗೊಬ್ಬ ಕಲೆಕ್ಟರರನ್ನು ನೇಮಿಸಿದನು (ವಾರನ್ ಹೇಸ್ಟಿಂಗ್ಸ್) 4) —ನು ನ್ಯಾಯಾಂಗವನ್ನು ಬೇರ್ಪಡಿಸಿ ನ್ಯಾಯಾಧೀಶರನ್ನು ನೇಮಿಸಿದನು (ಲಾರ್ಡ್ ಕಾರ್ನ್‌ವಾಲಿಸ್ 5) — ಬಿಲ್‌ರೆಗ್ಯುಲೇಟಿಂಗ್‌ಆಕ್ಟಿನ ತಿದ್ದುಪಡಿ (ಪಿಟ್ಸ್‌ಇಂಡಿಯಾಬಿಲ್) ಇದರ ಪ್ರಕಾರ ಕಂಪನಿಯು — ನಡೆಸಕೂಡದು )ಪಾರ್ಲಿಮೆಂಟಿನ ಒಪ್ಪಿಗೆಯಿಲ್ಲದೆ ದೇಶೀರಾಜರೊಡನೆ ಯುದ್ಧ ಅಥವಾ ಒಪ್ಪಂದ)

3) ನಾಲ್ಕನೆ ಮೈಸೂರು ಯುದ್ಧದ ಕಾರಣ ಪರಿಣಾಮಗಳು:- ಟಿಪ್ಪುವು (ನೆಪೋಲಿಯನ್) ಫ್ರೆಂಚರ ಸಹಾಯ ಬಯಸಿದುದು, ಫ್ರೆಂಚರ ಪ್ರಭಾವ ತನ್ನಲ್ಲಿ ಬೆಳೆಯ ಬಿಟ್ಟದು. ಈ ಯುದ್ಧ ವೆಲ್ಲೆಸ್ಲಿ ಕಾಲದಲ್ಲಾಯಿತು. **ಪರಿಣಾಮ—** ಮಳವಳ್ಳಿಯಲ್ಲಿ ಟಿಪ್ಪುವಿನ ಸೋಲು ಶ್ರೀರಂಗಪಟ್ಟಣದಲ್ಲಿ ಅವಸಾನ. ಹುಡುಗ ಕೃಷ್ಣ ರಾಜನಿಗೆ ಮೈಸೂರಿನ ಪಟ್ಟ

ಬ್ರಿಟೀಷರು ಸ್ವಲ್ಪ ಭಾಗ ನಿಜಾಮಗೆ ಕೊಟ್ಟು ಸ್ವಲ್ಪ ಭಾಗ ಇಟ್ಟುಕೊಂಡರು.

**4) ಭಾರತದಲ್ಲಿ ಬ್ರಿಟಿಷರಾಡಳಿತದ ಪರಿಣಾಮಗಳು—**

1) ಶೈಕ್ಷಣಿಕ-ಪಾಶ್ಚಾತ್ಯ ಶಿಕ್ಷಣ - ನಾಗರಿಕತೆಗಳ ಪರಿಚಯುವಾಯಿತು-ಇಂಗ್ಲೀಷ್ ವಿದ್ಯಾಶಾಲೆಗಳಾದ ಮೇಲೆ ನಾನಾ ದೇಶಗಳ ಇತಿಹಾಸ, ವಿಜ್ಞಾನ ವಿದ್ಯಮಾನಗಳನ್ನರಿತುಕೊಳ್ಳಲು ಎಡೆಸಿಕ್ಕಿತು. ಸಾಹಿತ್ಯ ಹಾಗೂ ವಿಜ್ಞಾನ ಗ್ರಂಥಗಳ ಅಭ್ಯಾಸದಿಂದ ಮಾನವನ ಹಕ್ಕು ಬಾಧ್ಯತೆಗಳು ತಿಳಿದು ಬಂದುವು ನಾವು ಕೂಡಾ ಸ್ವತಂತ್ರ ಜನಾಂಗವಾಗಬೇಕೆಂಬ ರಾಷ್ಟ್ರೀಯ ಬಾವನೆ ಬೆಳೆದು ಬರಲು ಅನುಕೂಲವಾಯಿತು.

2) **ಸಾಮಾಜಿಕ—** ಭಾರತೀಯರಲ್ಲಿದ್ದ ಅಂಧ: ಶ್ರದ್ಧೆಗಳೂ ದುಷ್ಟ ಪದ್ಧತಿಗಳೂ ದೂರವಾಗತೊಡಗಿದುವು. ಹಿಂದೂಧರ್ಮದ ಸುಧಾರಣೆಗಾಗಿ ಹಲವು ಸಂಘ ಸಂಸ್ಥೆಗಳು ಹುಟ್ಟಿದುವು ಆಚಾರ-ವಿಚಾರ, ಉಡುಗೆ-ತೊಡುಗೆಗಳೂ ಅನುಕರಣಕ್ಕೆ ಬಂದುವು.

**ಆರ್ಥಿಕ—** ಭಾರತದಲ್ಲಿ ಪಾಶ್ಚಾತ್ಯರ ವ್ಯಾಪಾರವು ಹೆಚ್ಚಿತು. ಅನೇಕ ಕರ್ಮ ಶಾಲೆಗಳೂ ಸ್ಥಾಪಿತವಾದುವು. ಯಂತ್ರಗಳ ಉಪಯೋಗ ಹೆಚ್ಚಿತು. ವ್ಯವಸಾಯ ಕ್ರಮದಲ್ಲೂ ಬದಲಾವಣೆಯುಂಟಾಯಿತು. ಆರ್ಥಿಕಸ್ಥಿತಿಯನ್ನರಿತು ಸುಧಾರಿಸಿ ಕೊಳ್ಳಲು ಪ್ರಯತ್ನಿಸತೊಡಗಿದರು.

**ಆಡಳಿತ -** ಭಾರತವು ಆಂತರಿಕ ಯುದ್ಧಗಳಿಲ್ಲದೆ ಒಂದೇ ಆಡಳಿತ ಸೂತ್ರಕ್ಕೆ ಒಳಪಡುವಂತಾಯಿತು. ಇದರಿಂದ ಸುದೃಢವಾದ ಆಡಳಿತ ಪದ್ಧತಿಯು ರೂಪಿತವಾಗಹತ್ತಿತು. ಹೀಗಾಗಿ ಭಾರತೀಯರಲ್ಲಿ ಒಂದೇ ರಾಷ್ಟ್ರದವರೆಂಬ ಭಾವನೆ ಹುಟ್ಟಿದೆ.

**ಬ್ರಿಟಿಷರಾಡಳಿತೆಯಿಂದ ಅನ್ಯಾಯವೂ ಆಗಿದೆ -**

ಅ) 1) ಕಂಪನಿಯ ಹಿರಿಯ ಹುದ್ದೆಗಳು ಭಾರತೀಯರಿಗೆ ಸಿಗುತಿರಲಿಲ್ಲ. 2) ಬ್ರಿಟಿಷರು ಅಪಾರ ಹಣ ದೋಚುತಿದ್ದರು ಕಾರಣ ಜನರ ಜೀವನ ಮಟ್ಟವು ಇಳಿಯ ತೊಡಗಿತು 3) ಸ್ವಯಂ ಆಡಳಿತದ ಗ್ರಾಮ ಪಂಚಾಯ

ತಿಗಳು ಶಕ್ತಿಗುಂದಿದುವು 5) ಕಾಗದ, ಗಾಜು ಇತ್ಯಾದಿ ಗುಡಿಕೈಗಾರಿಕೆಗಳು ಮೂಲೆ ಸೇರಿದವು 6) ಒಟ್ಟಾರೆ ಭಾರತವು ಬ್ರಿಟಿಷರ ಮಾರುಕಟ್ಟೆಯಾಗಿ ಕಚ್ಚಾ ವಸ್ತುಗಳನ್ನೊದಗಿಸುವ ದೇಶವಾಯಿತು.

ಇ) 1) ಅ) ಭಾರತೀಯರಿಗೆ ಪಾಶ್ಚಾತ್ಯ ಶಿಕ್ಷಣ, ನಾಗರಿಕತೆ, ಸಂಸ್ಕೃತಿಗಳ ಪರಿಚಯುವಾಯಿತು. ಇಂಗ್ಲಿಷ್ ಭಾಷೆಯ ಶಾಲೆಗಳಾದುದರಿಂದ ಸಾಮಾನ್ಯರ ಮಕ್ಕಳಿಗೂ ಜ್ಞಾನ ಸಂಪಾದಿಸುವ ಅವಕಾಶ ದೊರೆಯಿತು. ಇತರ ದೇಶಗಳ ವಿದ್ಯಮಾನವನ್ನರಿತು ಸ್ವತಂತ್ರರಾಗ ಬೇಕೆಂಬ ಜಾಗ್ರುತಿ ಹುಟ್ಟಿತು.

ಆ) ಸಾಮಾನ್ಯ ಜನರಲ್ಲಿದ್ದ ಅಜ್ಞಾನ, ಮೂಢನಂಬಿಕೆ ಹಾಗೂ ದುಷ್ಟ ಪದ್ಧತಿಗಳು ದೂರವಾಗತೊಡಗಿದುವು. ಸಹಗಮನು ಬಾಲ್ಯ ವಿವಾಹ ಮೊದಲಾದ ಕ್ರಮಗಳು ಕಡಿಮೆಯಾಗಿ ಹಿಂದೂಧರ್ಮದಲ್ಲಿದ್ದ ಲೋಪ ದೋಷಗಳ ತಿದ್ದುವಿಕೆಗೋಸ್ಕರ ಹಲವಾರು ಸಂಘಸಂಸ್ಥೆಗಳು ತಲೆಯೆತ್ತಿದುವು.

ಇ) ಬ್ರಿಟಿಷರಾಳ್ವಿಕೆಯಿಂದ ಭಾರತದಲ್ಲಿ ಪಾಶ್ಚಾತ್ಯ ದೇಶಗಳ ವ್ಯಾಪಾರ ವೃದ್ಧಿಯಾಯಿತು. ಅಲ್ಲಿನ ಕೈಗಾರಿಕೆಯ ಕ್ರಾಂತಿಯ ಫಲವಾಗಿ ಭಾರತದಲ್ಲಿಯೂ ಯಂತ್ರಗಳ ಉಪಯೋಗವೂ ಕಾರ್ಖಾನೆಗಳೂ ಆರಂಭಿಸಲ್ಪಟ್ಟವು.

ಈ) ಬ್ರಿಟಿಷರಾಡಳಿತದಿಂದ ಇಡಿ ಭಾರತವು ಒಂದೇ ಆಡಳಿತಸೂತ್ರದಲ್ಲಿ ಒಂದುಗೂಡತೊಡಗಿತು. ಇದೊಂದು ರಾಷ್ಟ್ರವೆಂಬ ಭಾವನೆಯುಂಟಾಗಿ ಸುದೃಢವಾದ ಆಡಳಿತ ಪದ್ಧತಿಯು ರೂಪುಗೊಳ್ಳುತ್ತಾ ಬಂತು.

2) 1ಕಂಪನಿ ಸರಕಾರದ ಹಿರಿಯಹುದ್ದೆಗಳೆಲ್ಲ ಬ್ರಿಟಿಷರಿಗೆ, ಕಾರಕೂನಗಿರಿಯಂತಹ ನೌಕರಿಯು ಭಾರತೀಯರಿಗೆ, ಇದರಿಂದ ಪ್ರೀತಿ ವಿಶ್ವಾಸ ಬೆಳೆದು ಬರಲಿಲ್ಲ. 2) ಜನರ ಸುಖಸೌಕರ್ಯಕ್ಕೆ ಬೇಕಾದ ಯಾವಯೋಜನೆಗಳನ್ನೂ ಕೈಕೊಳ್ಳದೆ ದಾರಾಳ ಹಣವನ್ನು ದೋಚಿಕೊಂಡು ಸಾಗುತಿದ್ದರು. ಇವರಿಂದ ಆರ್ಥಿಕಸ್ಥಿತಿ ಕೆಳಗಿಳಿಯಿತು. 3) ದೇಶೀಯ ಕೈಗಾರಿಕೆಗೆ ರಕ್ಷಣೆಯಿಲ್ಲದೆ ಗ್ರಾಮೋದ್ಯೋಗಗಳು – ಗುಡಿಕೈಗಾರಿಕೆಗಳು ಮೂಲೆಪಾಲಾದುವು. 4) ರೈತರು ಜಮೀನ್ದಾರರ ಹಿಡಿತಕ್ಕೆ ಸಿಕ್ಕಿಬಳಲಬೇಕಾಯಿತು.

ಕ್ಷಾಮಗಳು ತಪ್ಪಿದ್ದಲ್ಲ ಇದರಿಂದ ಜೀವನಮಟ್ಟವು ಕುಸಿಯಿತು.
5) ಭಾರತವು ಬ್ರಿಟಿಷರ ಸಿದ್ಧವಸ್ತುಗಳನ್ನು ಕೊಳ್ಳುವುದಕ್ಕೂ ಕಚ್ಚಾ ವಸ್ತುಗಳನ್ನು ಪೂರೈಸುವುದಕ್ಕೂ ಬೃಹತ್ ಮಾರುಕಟ್ಟೆಯಾಗಿ ಪರಿಣಮಿಸಿತು. ಈ ಎಲ್ಲ ಕಾರಣಗಳಿಂದಾಗಿ ಭಾರತೀಯರಿಗೆ ಅಸಮಾಧಾನವೇ ಉಂಟಾಯಿತು.

II **ಖಾಯಂ ಕಂದಾಯ ಪದ್ಧತಿಯಲ್ಲಿ** — ಸರಕಾರಕ್ಕೆ ಸಲುವ ಕಂದಾಯವು ಒಮ್ಮೆಗೆ ನಿರ್ಧಾರವಾಗಿದೆ. ಆ ಕಂದಾಯಕ್ಕೆ ಹೊಣೆಯಾಗಿ ಎಷ್ಟೋ ಎಕ್ರೆ ಜಮೀನುಳ್ಳವನೇ ಜಮೀನ್ದಾರ. ಈ ಪದ್ಧತಿಯಲ್ಲಿ ಸರಕಾರಕ್ಕೂ ರೈತರಿಗೂ ಕ್ಷೇಮವಿಲ್ಲ. ಏಕೆಂದರೆ ಸರಕಾರಕ್ಕೆ ತೆರಿಗೆ ಏರಿಸುವುದಕ್ಕೂ ಹೊಲಗಳ ಉತ್ಪನ್ನ ಹೆಚ್ಚಾಗುವುದಕ್ಕೂ ಸಾಧ್ಯವಿಲ್ಲ. ಜಮೀನ್ದಾರನು ಮಾತ್ರ ಹೆಚ್ಚು ಗೇಣಿಪಡೆಯುವುದಕ್ಕೂ ಹೊಲಗಳನ್ನು ಬಿಡಿಸಿ, ಅನ್ಯರಿಗೆ ಕೊಟ್ಟು ಹಣಪಡೆಯುವುದಕ್ಕೂ ಎಡೆಯಿದೆ.

**ರೈತವಾರಿಪದ್ಧತಿಯಲ್ಲಿ** — ಹೊಲದಲ್ಲಿ ದುಡಿಯುವ ರೈತನೇ ವರ್ಗದಾರ, ಹೊಲದ ಗುಣಕ್ಕೆ ಸರಿಯಾದ ಕಂದಾಯವು ನಿರ್ದಿಷ್ಟ ವರ್ಷಗಳಲ್ಲಿ ನಿಶ್ಚಯಿಸಲ್ಪಡುತ್ತದೆ. ಇದರಿಂದ ರೈತನು ತನ್ನದೇ ಹೊಲವೆಂಬ ಭಾವನೆಯಿಂದ ಹೆಚ್ಚಾದ ಬೆಳೆತೆಗೆಯಲು ಪ್ರಯತ್ನಿಸುತ್ತಾನೆ. ಹಲವು ವಿಚಾರಗಳಲ್ಲಿ ಈ ಪದ್ಧತಿಯೇ ಮೇಲು.

**ಉ) ಜತೆಗೂಡಿಸಿ ಬರೆಯಿರಿ.**

| | |
|---|---|
| ೧) ರಣಜಿತ ಸಿಂಹ | ಅ) ಆರ್ಕಾಟಿನ ವೀರ |
| ೨) ಟಿಪ್ಪುಸುಲ್ತಾನ | ಆ) ಕೈಗಾರಿಕೆಗಳ ಜನಕ |
| ೩) ಹೈದರಾಲಿ | ಇ) ಪಂಜಾಬದಸಿಂಹ |
| ೪) ರಾಬರ್ಟ್ ಕ್ಲೈವ | ಈ) ಪಿಟ್ಸ್ ಇಂಡಿಯಾ ಬಿಲ್ |
| ೫) ಲಾರ್ಡ್ ಕ್ಯಾನಿಂಗ್ | ಉ) ಪೇಶ್ವೆಪದವಿಯ ರದತಿ |
| ೬) ಜಮ್ಶೆಡ್ಜಿ ಟಾಟಾ | ಎ) ಮೈಸೂರಿನ ಹುಲಿ |
| ೭) ಹೇಸ್ಟಿಂಗ್ಸ್ | ಏ) ಇಂಡಿಯಾದ ಮೊದಲನೆ ವೈಸರಾಯಿ |
| ೮) ವಾರನ್ ಹೇಸ್ಟಿಂಗ್ಸ್ | |

## 6. ಭಾರತದಲ್ಲಿ ರಾಷ್ಟ್ರೀಯತೆಯ ಉದಯ

ಅ) ಒಂದು ರಾಷ್ಟ್ರದ ನಿವಾಸಿಗಳು ತಾವೆಲ್ಲ ಒಂದೆಂಬ ಭಾವನೆಯೇ ರಾಷ್ಟ್ರೀಯತೆ. ಇದು ಬಲವಾದಹಾಗೆ ಆ ರಾಷ್ಟ್ರದ ಐಕ್ಯತೆ, ಜಾಗ್ರತಿ ಮತ್ತು ಪ್ರಗತಿ ಹೆಚ್ಚುತ್ತವೆ. 18-19ನೆ ಶತಮಾನಗಳಲ್ಲಿ ಫ್ರಾನ್ಸ್ ಇಟಲಿ, ಅಮೇರಿಕಾ ದೇಶಗಳು ಸ್ವತಂತ್ರವಾದ ಮೇಲೆ ಭಾರತದಲ್ಲಿಯೂ ರಾಷ್ಟ್ರೀಯತೆ ಉದಯವಾಯಿತು. ಇದಕ್ಕೆ ನವರೋಜ್, ತಿಲಕ್ ಮೊದಲಾದ ಮುಖಂಡರ ಪ್ರಯತ್ನಗಳೇ ಕಾರಣ. ಬ್ರಿಟಿಷರ ದಬ್ಬಾಳಿಕೆಯ ಫಲವಾಗಿ, ಅವರಾಳ್ವಿಕೆಯನ್ನೇ ಕೊನೆಗೊಳಿಸಬೇಕೆಂಬ ಇಚ್ಛೆಯೂ ಬಲವಾಯಿತು.

**ದಾದಾಬಾಯಿನೌರೋಜಿಯವರ**— ಬಾಲಗಂಗಾಧರತಿಲಕರ ಸ್ವಾತಂತ್ರ್ಯಘೋಷಣೆಯಿಂದ ಭಾರತೀಯರಲ್ಲಿ ಸ್ವಾತಂತ್ರ್ಯಪಡೆಯುವ ಹಂಬಲ ಹುಟ್ಟಿತು. ಬ್ರಿಟಿಷ್‌ರ ವ್ಯಾಪಾರ ದೋರಣೆ ಹಾಗೂ ನೌಕರಿಗಳಲ್ಲಿ ಹಿರಿಯ ಹುದ್ದೆಗಳು ಲಭ್ಯವಾಗದಕಾರಣ ತಮ್ಮ ಆರ್ಥಿಕ ಸ್ಥಿತಿಯ ವಿಚಾರದಲ್ಲಿ ಅಸಮಾಧಾನವುಂಟಾಗಿ ವಿಶಾಲವಾದ ಭಾವನೆಯೂ ಬೆಳೆಯತೊಡಗಿತು.

**ಸುಧಾರಣೆಗಳು**— ಬ್ರಿಟಿಷರಿಂದ ಸಣಬಿನ ಕಾರ್ಖಾನೆ, ಹತ್ತಿಗಿರಣಿಗಳು ಸ್ಥಾಪಿಸಲ್ಪಟ್ಟಮೇಲೆ ಭಾರತೀಯ ಕೆಲಸಗಾರರು ಬಡವರಾದರು. ಇದನ್ನು ನೋಡಿ ಟಾಟಾರವರು ಉಕ್ಕು-ಕಬ್ಬಿಣ ಕಾರ್ಖಾನೆಯನ್ನು ತೆರೆದರು. ಕೆಲವು ಬುದ್ಧಿವಂತರಾದವರು ಪಾಶ್ಚಾತ್ಯಶಿಕ್ಷಣ ಪ್ರಭಾವದಿಂದ ಭಾರತೀಯರಲ್ಲಿದ್ದ ಮೂಢನಂಬಿಕೆಗಳನ್ನು ದೂರಮಾಡಲು ಯತ್ನಿಸಿದರು. ಇವರಲ್ಲಿ ರಾಜರಾಮ ಮೋನಹರಾಯರೇ ಮೊದಲಿಗರು. ಹಾಗೆ **ಕೇಶವಚಂದ್ರಸೇನರು** ಹಿಂದೂ ಧರ್ಮದ ಅರ್ಥಹೀನ ಆಚರಣೆಗಳನ್ನು ತೊಡೆದು ಹಾಕಲು ಸಾಧಿಸಿದರು. **ಜಸ್ಟೀಸ್ ರಾನಡೆಯವರು,** ದಯಾನಂದ ಸರಸ್ವತಿಯವರು, **ಶ್ರೀಮತಿ ಅನಿಬೆಸೆಂಟ್** ಅವರು ಭಾರತೀಯರಲ್ಲಿ ಹಿಂದೂಧರ್ಮ ಸಂಸ್ಕೃತಿಗಳ ಬಗೆಗೆ ಅಭಿಮಾನ ಹುಟ್ಟುವಂತೆ ಮಾಡಿದರು.

**ರಾಮಕೃಷ್ಣಪರಮಹಂಸರು**— ಭಾರತೀಯ ಸನಾತನ ಧರ್ಮದ ಬಗೆಗೆ ಜನರಲ್ಲಿ ಜಾಗ್ರತೆಹುಟ್ಟುವಂತೆ ಬೋಧಿಸಿದರು. ಅವರ ಶಿಷ್ಯ **ವಿವೇಕಾನಂದರು** ಹಿಂದೂಧರ್ಮಸಂಸ್ಕೃತಿಯನ್ನು ದೇಶವಿದೇಶಗಳಲ್ಲಿ ಪ್ರಸಾರ

ಮಾಡಿದರು. **ಜಗದೀಶಚಂದ್ರಭೋಸರು, ಸಿ. ವಿ. ರಾಮನ್, ಪಿ. ಸಿ.** ರೇ ಮೊದಲಾದವರು ಪ್ರಯೋಗಗಳ ಮೂಲಕ ಹೊಸ ಹೊಸ ತತ್ವಗಳನ್ನು ಕಂಡುಹಿಡಿದು ವೈಜ್ಞಾನಿಕ ಬೆಳವಣಿಗೆಯನ್ನು ಮಾಡಿದರು.

ಭಾರತೀಯ ಸಾಹಿತ್ಯಗಳ ಮೂಲಕ **ಬಂಕಿಂಚಂದ್ರರೂ ರವೀಂದ್ರನಾಥಠಾಕೂರರೂ** ಜನಜನರಲ್ಲಿ ಜಾಗ್ರತಿ ಹುಟ್ಟಿಸಿದರು. ಬಂಕಿಂಚಂದ್ರರ ವಂದೇಮಾತರಂ ಗೀತೆ ಜನರಲ್ಲಿ ಸ್ಫೂರ್ತಿಹುಟ್ಟಿಸಿ, ಸ್ವಾತಂತ್ರ್ಯಹೋರಾಟದಲ್ಲಿ ಭಾಗವಹಿಸುವಂತೆ ಮಾಡಿದೆ. ರವೀಂದ್ರರ ಜನಗಣ ಗೀತಯು ರಾಷ್ಟ್ರಭಕ್ತಿಯನ್ನು ಹುಟ್ಟಿಸುವ ರಾಷ್ಟ್ರಗೀತೆಯೇ ಆಗಿದೆ.

ಇ) I 1) ಒಂದುರಾಷ್ಟ್ರದ ಜನರು ಯಾವಭಾಗದಲ್ಲಿರಲಿ, ಯಾವ ಭಾಷೆ ಯಾವ ಧರ್ಮದವರೇ ಇರಲಿ, ನಾವೆಲ್ಲ ಆ ರಾಷ್ಟ್ರದ ನಿವಾಸಿಗಳು ನಾವೆಲ್ಲರೂ ಒಂದೇ, ನಮ್ಮ ಆಸೆ ಆಕಾಂಕ್ಷೆಗಳೆಲ್ಲ ಒಂದೇ ಎಂಬ ಭಾವನೆಯೇ ರಾಷ್ಟ್ರೀಯತೆ.

2) ಬ್ರಿಟಿಷರಾಡಳಿತದ ಪರಿಣಾಮವಾಗಿ ಸ್ವಾತಂತ್ರ್ಯಸಂಪಾದನೆಯಲ್ಲಿ, ಸರಕಾರಿನೌಕರಿಗಳಲ್ಲಿ, ಔದ್ಯೋಗಿಕ 1) -ವೈಜ್ಞಾನಿಕ-ಸಾಂಸ್ಕೃತಿಕ ಸಾಹಿತ್ಯ ಮೊದಲಾದ ಕ್ಷೇತ್ರಗಳಲ್ಲಿ ರಾಷ್ಟ್ರೀಯ ಜಾಗ್ರತಿಯು ಉದಯ ವಾಯಿತು.

II 1) ಸೌಮ್ಯವಾದಿಗಳಾದ ನವರೋಜಿಯವರು ರಾಷ್ಟ್ರೀಯತೆಯ ಪಿತಾಮಹರು. ಬ್ರಿಟಿಷರ ಆಡಳಿತ ಪದ್ಧತಿಯು ಭಾರತೀಯರ ಬಡತನಕ್ಕೆ ಕಾರಣವೆಂದು ಸಾರಿದುದರಿಂದ ಜನರಲ್ಲಿ ಸ್ವರಾಜ್ಯಪಡೆಯುವ ಹಂಬಲವುಂಟಾಯಿತು.

2) ಜಮಶೇಠಜೀತಾತಾರವರು ಭಾರತದಲ್ಲಿ ಕೈಗಾರಿಕೆಗಳ ಜನಕರಾಗಿ ಜಮಶೇಠಪುರದಲ್ಲಿ ಉಕ್ಕು ಕಬ್ಬಿಣ ಕಾರ್ಖಾನೆಯನ್ನು ತೆರೆದರು. ಇವರ ಯೋಜನೆಯ ಫಲವಾಗಿ ಹಲವು ಕಟ್ಟಡಗಳು ಗಿರಣಿಗಳು, ವೈಜ್ಞಾನಿಕ ಸಂಸ್ಥೆಗಳೂ ನಿರ್ಮಿಸಲ್ಪಟ್ಟಿವೆ.

3) ಪಾಶ್ಚಾತ್ಯಶಿಕ್ಷಣಜ್ಞರಾದ ಬುದ್ಧಿವಂತ ಭಾರತೀಯರಲ್ಲಿ ಬಂಗಾಳದ ರಾಜಾರಾಮ್ ಮೋಹನರಾಯರೇ ಮೊದಲಿಗರು. ಇವರು ಬ್ರಹ್ಮಸಮಾಜವೆಂಬ ಸಂಸ್ಥೆಯನ್ನು ಸ್ಥಾಪಿಸಿ ಭಾರತೀಯರಲ್ಲಿದ್ದ ಮೂಢನಂಬಿಕೆಗಳನ್ನು ದೂರಮಾಡಿ, ಪಾಶ್ಚಾತ್ಯರಲ್ಲಿದ್ದ ಒಳ್ಳೆ ಅಂಶಗಳನ್ನು ಅಳವಡಿಸಿಕೊಳ್ಳುವಂತೆ ಬೋಧಿಸಿದರು. ಇವರನ್ನು ನವಭಾರತದ ಜನಕರೆಂದು ಕರೆಯುವರು

4) ಸನಾತನ ಧರ್ಮನಿಷ್ಠರಾದ ಮಾಳವೀಯರು ಶ್ರೀಮತಿ ಅನಿಬೆಸೆಂಟರಿಂದ ಸ್ಥಾಪಿತವಾದ ಕಾಲೇಜನ್ನು ಬನಾರಸ್ ಹಿಂದೂವಿಶ್ವವಿದ್ಯಾಲಯವನ್ನಾಗಿ ಬೆಳೆಗಿಸಿದರು. ಇವರು ಚಿಕ್ಕಂದಿನಲ್ಲೇ ರಾಷ್ಟ್ರಭಕ್ತರಿದ್ದು ಗಾಂಧೀಜಿಯವರೊಡನೆ ಇಂಗ್ಲಾಂಡಿನ ಚಕ್ರಗೋಷ್ಠಿಗೂ ಹೋಗಿದ್ದರು.

5) ಬಂಗಾಳದ ಜಗದೀಶ್‌ಚಂದ್ರಭೋಸರು ಪಾಶ್ಚಾತ್ಯಶಿಕ್ಷಣಪಡೆದು ವೈಜ್ಞಾನಿಕ ಕ್ಷೇತ್ರದಲ್ಲಿ ಹಲವು ಪ್ರಯೋಜನಗಳ ಮೂಲಕ ಪರಿಶ್ರಮಿಸಿದ್ದಾರೆ ಮುಖ್ಯ - ಮಾನವರಂತೆ ಸಸ್ಯಗಳಿಗೂ ಜೀವವಿದೆಯೆಂಬುದನ್ನು ದೃಢಪಡಿಸಿದ್ದರು.

6) ರಾಮಕೃಷ್ಣಪರಮಹಂಸರ ಶಿಷ್ಯರಾದ ವಿವೇಕಾನಂದರು ರಾಮಕೃಷ್ಣಾಶ್ರಮಗಳ ಸ್ಥಾಪಕರು. ಇವರು ಭಾರತೀಯ ಸಂಸ್ಕೃತಿಯನ್ನು ಸ್ವದೇಶದಲ್ಲಿಯೂ ಇಂಗ್ಲಾಂಡು, ಅಮೇರಿಕಾ ಮುಂತಾದ ವಿದೇಶಗಳಲ್ಲಿಯೂ ಪ್ರಸಾರಮಾಡಿದರು. ಇವರ ಪ್ರಯತ್ನದ ಫಲವಾಗಿ ಭಾರತೀಯರಿಗೆ ತಮ್ಮ ಧರ್ಮಸಂಸ್ಕೃತಿಗಳ ಕಡೆಗೆ ಅಭಿಮಾನಹುಟ್ಟುವಂತಾಯಿತು.

| | | |
|---|---|---|
| III 1) | ರಾನಡೆ | ಪ್ರಾರ್ಥನಾಸಮಾಜ |
| 2) | ಅನಿಬೆಸೆಂಟ್ | ಥಿಯೋಸೋಫಿಕಲ್ ಸೊಸ್ಯಾಟಿ |
| 3) | ರಾಜಾರಾಮ್‌ಮೋಹನರಾಯ್ | ಬ್ರಹ್ಮಸಮಾಜ |
| 4) | ದಯಾನಂದಸರಸ್ವತಿ | ಆರ್ಯಸಮಾಜ |

IV ನೋಬೆಲ್ ಬಹುಮಾನಗಳನ್ನು ಭೌತಶಾಸ್ತ್ರ, ರಸಾಯನಶಾಸ್ತ್ರ, ವೈದ್ಯಶಾಸ್ತ್ರ, ಸಾಹಿತ್ಯ, ಶಾಂತಿಪ್ರಯತ್ನ ಈ ಐದು ವಿಷಯಗಳಲ್ಲಿ ಅತ್ಯಧಿಕವಾಗಿ ಪರಿಶ್ರಮಿಸಿದವರಿಗೆ ಕೊಡುತ್ತಾರೆ. ಪಾರಿತೋಷಕದ ಮೌಲ್ಯಸುಮಾರು ಎರಡುಕಾಲುಲಕ್ಷ ರುಪಾಯಿ.

ಈ ಪಾರಿತೋಷಕಗಳನ್ನೂ ಉಳಿದ ಬಹುಮಾನಗಳನ್ನೂ ಸಾರ್ವದೇಶದ ಲೋಕಸಭೆಯು ನಿರ್ಧರಿಸಿದವರಿಗೆ ಸ್ವೀಡನ್ ದೇಶದ ನೋಬೆಲ್ ಸಂಸ್ಥೆಯು ನೀಡುತ್ತದೆ (ಈ ಬಹುಮಾನಗಳನ್ನು ನೀಡುವುದಕ್ಕಾಗಿ ಸ್ವೀಡನ್‌ನ ಆಲ್ಫ್ರಡ್ ಬರ್ನಾರ್ಡ್‌ನೋಬಲ್ ಎಂಬವನು ತನ್ನ ಆಸ್ತಿಯ ಬಹುದೊಡ್ಡ ಭಾಗವನ್ನೇ ದಾನಮಾಡಿದ್ದ)

ಉ) ಅನುಭವಕ್ಕಾಗಿ ಜತೆಗೂಡಿಸಿ ಬರೆಯಲಾಗಿದೆ

ಅ) ಗೋಪಾಲಕೃಷ್ಣಗೋಖಲೆ - ಭಾರತಸೇವಕಸಮಾಜ

ಆ) ಶ್ರೀಮತಿ ಅನಿಬೆಸೆಂಟ್ (1909) ಭಾರತದ ಥಿಯೋಸೋಫಿಕಲ್ ಸೊಸೈಟಿ ಅಧ್ಯಕ್ಷಳು (ಇ) ಬಾಲಗಂಗಾಧರ್ ತಿಲಕರು - ಸ್ವಾತಂತ್ರ್ಯವು ನಮ್ಮ ಜನ್ಮಸಿದ್ಧಹಕ್ಕು (ಈ) ಸಿ. ವಿ. ರಾಮನ್ - ನೋಬೆಲ್ ಬಹುಮಾನ ಉ) ಕೇಶವಚಂದ್ರಸೇನ - ಬ್ರಹ್ಮಸಮಾಜದ ಹೊಸ ಶಾಖೆ

## ರಾಷ್ಟ್ರೀಯ ಪುರುಷರೂ ಅವರ ಕಾಲವೂ

1) ರಾಜಾರಾಮ್‌ಮೋಹನರಾವ್ 1772-1833 (2) ದಾದಾಬಾಯಿ ನೌರೋಜು 1824-1917 (3) ರಾನಡೇ 1842—1901 (4) ಅನಿಬೆಸೆಂಟ್ 1847-1933 (5) ತಿಲಕರು 1856-1920 (6) ಮಾಲವೀಯರು 1861-1946 (7) ವಿವೇಕಾನಂದರು 1862-1902 (8) ರಾಮಕೃಷ್ಣಪರಮಹಂಸರು-1836-1886 (9) ಲಜಪತರಾವ್ 1865-1928 10) ಠಾಕೂರರ್ (ವಿಶ್ವಕವಿ) 1861-1941 (11) ಗೋಖಲೆ 1866-1915 (12) ಅರವಿಂದಘೋಷ್ 1872-1951 (13) ವಲ್ಲಭಭಾಯಿಪಟೇಲ್ 1875-1950 (14) ಸುಭಾಸ್‌ಚಂದ್ರಭೋಸ್ 1897-(15) ಗಾಂಧಿಜಿ 1869-1948

## 7) ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ

ಅ) ಭಾರತದಲ್ಲಿ ಬ್ರಿಟಿಷ್‌ಸೈನ್ಯದಲ್ಲಿದ್ದ ಹಿಂದು ಮುಸ್ಲಿಂ ಸೈನಿಕರು ಕೊಬ್ಬುಸವರಿದತೋಟೆಗಳನ್ನು ಉಪಯೋಗಿಸುವುದಿಲ್ಲವೆಂದು ನಿರಾಕರಿಸಿದ್ದರಿಂದ 1857ರಲ್ಲಿ ಸ್ವಾತಂತ್ರ್ಯಸಂಗ್ರಾಮವು ಆರಂಭವಾಯಿತು. ಮೊದ

ಲಿಗೆ ಮೀರತ್, ಕಾನ್ಪುರಗಳಲ್ಲಿದ್ದ ಸೈನಿಕರು ಕೆಲವು ಬ್ರಿಟಿಷ್ ಅಧಿಕಾರಿಗಳನ್ನು ಕೊಂದು ಸೆರೆಯಾಳುಗಳನ್ನು ಬಿಡಿಸಿ, ಡಿಲ್ಲಿಗೆ ಸಾಗಿ ಮುಪ್ಪಿನ ಬಹದ್ದೂರಷಹನನ್ನು ತಮ್ಮ ನಾಯಕನೆಂದು ಸಾರಿ ಸಮ್ರಾಟನನ್ನಾಗಿ ಮಾಡಿದರು. ಅನಂತರ ಈ ಹೋರಾಟವು ಲಕ್ನೋ ಮೊದಲಾದ ಕಡೆಗಳಲ್ಲಿ ನಡೆಯಿತು.

ಸಂಗ್ರಾಮದಲ್ಲಿ ಭಾಗವಹಿಸಿದ ಮುಖಂಡರು ಯಾರಾರು? ಅವರು ಏತಕ್ಕಾಗಿ ಯುದ್ಧಕ್ಕಿಳಿದರು?

1) ಕೊನೆಯ ಪೇಶ್ವೆಬಾಜಿರಾಯನ ದತ್ತುಪುತ್ರ **ನಾನಾಸಾಹೇಬ**- ಇವನ ಕೇಂದ್ರ ಕಾನ್ಪುರ. ಇವನ ಪೇಶ್ವೆಪದವಿಯನ್ನೂ ಮತ್ತೆ ಜೀವನಾಂಶವನ್ನೂ ಬ್ರಿಟಿಷರು ತೆಗೆದುಹಾಕಿದ್ದರು. ಆದ್ದರಿಂದ ಬ್ರಿಟಿಷರಿಗೆ ಬಲವಾದ ಹೊಡೆತಕೊಟ್ಟು ಸ್ವರ್ಗಸ್ಥನಾದ 2) **ಝಾನ್ಸಿಲಕ್ಷ್ಮೀಬಾಯಿ**- ಬ್ರಿಟಿಷರು ದತ್ತು ತೆಗೆದುಕೊಳ್ಳಲೂ ಒಪ್ಪದೆ, ರಾಜ್ಯಾಪಹಾರ ಮಾಡಿದುದರಿಂದ ಹೋರಾಟದ ಮುಂದಾಳಾಗಿ ನಿಂತಳು ಗ್ವಾಲಿಯಾರಿಗೆ ಹೋಗಿ ಬ್ರಿಟಿಷರೊಡನೆ ವೀರಾವೇಶದಿಂದ ಕಾದಾಡಿದರೂ ದುರ್ದೈವದಿಂದ ತೀರಿಕೊಂಡಳು 3) ಲಕ್ಷ್ಮೀಬಾಯಿಯ ಸಹಾಯಕ **ತಾತ್ಯಾಟೋಪಿ**. ಕೂಟಯುದ್ಧದಲ್ಲಿ ಸಮರ್ಥ, ಆದರೆ ಬ್ರಿಟಿಷರಿಗೆ ಸೆರೆ ಸಿಕ್ಕಿಗಲ್ಲಿ ಗೇರಿಸಲ್ಪಟ್ಟನು 4) **ಕುನ್ವರಸಿಂಗ** - ಬಿಹಾರಪ್ರಾಂತ್ಯದಲ್ಲಿದ್ದ ಇವನ ಆಸ್ತಿಯನ್ನು ಬ್ರಿಟಿಷರು ವಶಪಡಿಸಿದ್ದರು. ಹೀಗಾಗಿ ಎಂಭತ್ತು ವರ್ಷದ ಮುದುಕನಾದರೂ ಬಿಹಾರ್ ವಿಭಾಗದಲ್ಲಿ ಹೋರಾಡಿ ಕೀರ್ತಿವಂತನಾದನು. 5) ಅಯೋಧ್ಯೆಯ ರಾಣಿ ಬೇಗಂ ಹಜರತ್ ಮಹಲ್. ಇವಳ ಸ್ವಾಮಿತ್ವವು ಡಾಲ್‌ಹೌಸಿಯಿಂದ ನಷ್ಟವಾದ ಕಾರಣ ಲಕ್ನೋ ರಕ್ಷಣೆಯಲ್ಲಿ ಲಕ್ಷ್ಮೀಬಾಯಿಯಂತೆ ಕ್ಷಾತ್ರ ತೇಜಸ್ಸನ್ನು ಪ್ರದರ್ಶಿಸಿದಳು.

ಜಯಾಪಜಯಗಳು:— ಈ ಸಂಗ್ರಾಮದಲ್ಲಿ ಅನೇಕ ಬ್ರಿಟಿಷ್ ಅಧಿಕಾರಿಗಳು ಸಾಯಲ್ಪಟ್ಟರು. ಬ್ರಿಟಿಷ್‌ಸೇನಾನಿಗಳಲ್ಲಿ ಹ್ಯಾವಲಾಕ್ ಮತ್ತು ನೀಲರು ಕಾನ್ಪುರ - ಲಕ್ನೋಗಳಲ್ಲಿ, ಕ್ಯಾಂಪ್‌ಬೆಲ್‌ನು ಅಯೋಧ್ಯೆ - ರೋಹಿ

ಲ್ ಖಂಡಗಳಲ್ಲಿ, ಹ್ಯೂಂರೋಸನು ಬುಂದೇಲ್‌ಖಂಡ, ಝಾನ್ಸಿ ಮತ್ತು ಗ್ವಾಲಿಯರಗಳಲ್ಲಿ ಹೋರಾಡಿ ಜಯಪಡೆದರು. ಮತ್ತೆ ದಿಲ್ಲಿಯನ್ನು ವಶಪಡಿಸಿ ಹಿಂದಕ್ಕೆ ಪಡೆದ ಪಟ್ಟಣಗಳಲ್ಲಿ ಕೆಲವು ಜನರನ್ನು ಹಿಂಸಿಸುತ್ತಾ ಬಂದರು.

**ಫಲಿತಾಂಶ**— ಈ ಸಂಗ್ರಾಮದಲ್ಲಿ ಹಲವು ಕಾರಣಗಳಿಂದ ಭಾರತೀಯರು ಅಪಜಯವನ್ನೇ ಪಡೆದರು. ಆದರೂ ಭಾರತೀಯರಲ್ಲಿದ್ದ ಜಾಗ್ರತಿಯನ್ನು ನೋಡಿ ಬ್ರಿಟಿಷ್‌ರ ಆಡಳಿತ ಧೋರಣೆಯು ಸ್ವಲ್ಪಮಟ್ಟಿಗೆ ಬದಲಾಗುವಂತಾಯಿತು.

ಇ) I 1) ಭಾರತದಲ್ಲಿ ಬ್ರಿಟಿಷ್ ಸೈನ್ಯದಲ್ಲಿದ್ದ ಹಿಂದೂ ಮುಸ್ಲಿಂ ಸೈನಿಕರು. ಅವರ ಅಸಮಾಧಾನಕ್ಕೆ ಕಾರಣಗಳು:— 1) ಹೆಚ್ಚಿನ ಸ್ಥಾನಮಾನಗಳು ಬ್ರಿಟಿಷ್ ಸೈನಿಕರಿಗೆ ಸಲ್ಲುತಿದ್ದುವು. ಭಾರತೀಯರನ್ನು ಸರಿಯಾಗಿ ನೋಡುತ್ತಿರಲಿಲ್ಲ. 2) ಆಗ ಹೊಸತಾಗಿ ಬಂದ ತೋಟೆಗಳನ್ನು ಹಲ್ಲಿನಿಂದ ಕಚ್ಚಿತೆಗೆದು ಬಂದೂಕುಗಳಲ್ಲಿ ತುಂಬಬೇಕಿತ್ತು. ಅವುಗಳಲ್ಲಿ ದನ ಹಾಗೂ ಹಂದಿಯ ಕೊಬ್ಬನ್ನು ಸವರಿದ್ದರಿಂದ ಹಿಂದೂ ಮುಸ್ಲಿಂ ಸೈನಿಕರು ಅವನ್ನುಪಯೋಗಿಸಲು ನಿರಾಕರಿಸಿದರು. 3) ಅದಕ್ಕಾಗಿ ಹಲವು ಸೈನಿಕರು ಶಿಕ್ಷಿಸಲ್ಪಟ್ಟರು. ಇದರಿಂದ ಬ್ರಿಟಿಷರ ವಿರುದ್ಧ ಹೋರಾಟ ನಡೆಯಿತು

2) ಆರಂಭ ಮೀರತ್ತಿನಲ್ಲಿ ಲಕ್ನೋ, ಪಾಟ್ನಾ, ಝಾನ್ಸಿ, ಗ್ವಾಲಿಯಾರ್, ದಿಲ್ಲಿ, ಕಾನ್ಪುರಗಳಲ್ಲಿ ಹೋರಾಟ ನಡೆಯಿತು.

3) ಕಾನ್ಪುರದಲ್ಲಿದ್ದ ನಾನಾಸಾಹೇಬ್, ಝಾನ್ಸಿರಾಣಿ ಲಕ್ಷ್ಮೀಭಾಯಿ ಅವಳ ಸಹಾಯಕನಾದ ತಾಂತ್ಯಾಟೋಪಿ. ಅಯೋಧ್ಯೆಯ ರಾಣಿ ಬೇಗಂಹಜರತ್‌ಮಹಲ್, ಬಿಹಾರ್ ಪ್ರಾಂತ್ಯದ ಕುನ್ವರಸಿಂಗ್, ಈ ಹೋರಾಟದಲ್ಲಿ ಮುಖ್ಯ ಭಾಗವಹಿಸಿದ್ದರು.

4) ಸಾಮಾನ್ಯರು ಈ ಹೋರಾಟದಲ್ಲಿ ಭಾಗವಹಿಸಲಿಲ್ಲ.
2) ಹೋರಾಟಗಾರರಲ್ಲಿ ಸಂಘಟನೆ ಹಾಗೂ ಪೂರ್ವಸಿದ್ಧತೆಗಳಿರಲಿಲ್ಲ 3) ಸಿಖ್ ಮತ್ತು ಘೂರ್ಕರು ಬ್ರಿಟಿಷರಲ್ಲಿ ನಿಷ್ಠೆತೋರಿದ್ದರು 4) ಸಿಂಧ್ಯ, ಹೋಳ್ಕರ್ ನಿಜಾಮರು ಬ್ರಿಟಿಷರಿಗೆ ಸಹಾಯ ನೀಡಿದರು 5) ಆಧುನಿಕ

ಶಸ್ತ್ರಾಸ್ತ್ರಗಳು ಬ್ರಿಟಿಷರಲ್ಲಿದ್ದಷ್ಟು ಹೋರಾಟಗಾರರಲ್ಲಿರಲಿಲ್ಲ 6) ವಾಹನ-ಸಂಚಾರ ಸೌಕರ್ಯಗಳೂ ಇದ್ದಿಲ್ಲ. ಹೀಗಾಗಿ ಅಂದಿನಹೋರಾಟವು ವಿಫಲ ವಾಯಿತು.

5) ಭಾರತದಲ್ಲಿ ಕಂಪನಿಯಾಡಳಿತವು ಅಂತ್ಯವಾಗಿ ಬ್ರಿಟಿಷ್‌ಪಾರ್ಲಿಮೆಂಟಿನ ಒಪ್ಪಿಗೆಯಿಂದ ಬ್ರಿಟಿಷ್ ಸರಕಾರದ ವಶಕ್ಕೆ ಬಂತು 2) ಬ್ರಿಟನದ ವಿಕ್ಟೋರಿಯಾ ರಾಣಿಯು ಭಾರತದ ಚಕ್ರವರ್ತಿನಿಯಾದಳು 3) ಅವಳ ಪ್ರತಿನಿಧಿಯಾಗಿ ಇಂಡಿಯಾ ಗವರ್ನರ್ ಜನರಲ್‌ನು ವೈಸರಾಯಿಯಾಗಿ ಆಡಳಿತ ನಡೆಸುವಂತಾಯಿತು. 4) ಭಾರತೀಯರ ಸಮಾಧಾನಕ್ಕಾಗಿ ವಿಕ್ಟೋರಿಯಾ ರಾಣಿಯು ಪ್ರಸಿದ್ಧ ಪತ್ರಿಕೆಯೊಂದನ್ನು (ಜಾಹೀರುನಾಮೆ) ಹೊರಡಿಸಿದಳು

5) ಈ ಮೂಲಕ ಲ್ಯಾಪ್ಸ್ ಧೋರಣೆಯನ್ನು ರದ್ದುಗೊಳಿಸಿ ಭಾರತೀಯರ ಸಾಮಾಜಿಕ ಜೀವನದಲ್ಲಿ ಪ್ರವೇಶಿಸುವುದಿಲ್ಲೆಂದೂ ಉದ್ಯೋಗ ಮುಂತಾದ ವಿಷಯಗಳಲ್ಲಿ ಸರಿಸಮಾನತೆಯ ದೃಷ್ಟಿಯಿಂದ ನೋಡಲಾಗುವುದೆಂದೂ ಆಶ್ವಾಸನೆ ಕೊಟ್ಟಳು.

| | |
|---|---|
| II 1) ಝೂನ್ಸಿರಾಣಿ | ಲಕ್ಷ್ಮೀಬಾಯಿ |
| 2) ಬ್ರಿಟನಿನ ರಾಣಿ | ವಿಕ್ಟೋರಿಯಾ |
| 3) ಬಿಹಾರವಿಭಾಗದಲ್ಲಿ ಹೋರಾಟ ನಡೆಸಿದವೀರ | ಕುನ್ವರಸಿಂಗ |
| 4) ಅಯೋಧ್ಯೆಯ ರಾಣಿ | ಬೇಗಂಹಜರತ್ ಮಹಲ್ |
| 5) ಲಕ್ಷ್ಮೀಬಾಯಿಯ ಸಹಾಯಕ | ತಾಂತ್ಯಾಟೋಪಿ |
| 6) ಕೊನೆಯ ಪೇಶ್ವೆಬಾಜಿರಾಯನ ದತ್ತುಮಗ | ನಾನಾಸಾಹೇಬ್ |

III ಈ ಹೋರಾಟದ ಕಾಲದಲ್ಲಿ ನರಗುಂದದ ಬಾಬಾಸಾಹೇಬ್, ಸುರಪುರದ ವೆಂಕಟಪ್ಪ, ಮುಂಡರಗಿ ಭೀಮರಾಯ, ಡಂಬಳದದೇವರಾಯ ಮೊದಲಾದವರು ಬ್ರಿಟಿಷರನ್ನೋಡಿಸಲು ಕಾದಾಡಿದ್ದರು.

ಉ) ಈ ಸಂಗ್ರಾಮಕಾಲದಲ್ಲಿದ್ದ ಗವರ್ನರ್‌ಜನರಲ್ - ಲಾರ್ಡ್‌ಕ್ಯಾನಿಂಗ್. 2) ವಿಕ್ಟೋರಿಯಾ ರಾಣಿಯ ಘೋಷಣಾದಿನ 1-11-1958 (3) ನಾನಾಸಾಹೇಬನ ವರ್ಷಾಶನ ರದ್ದುಗೊಳಿಸಿದವನು - ಲಾರ್ಡ್‌ಡಾಲ್‌ಹೌಸಿ

## 8. ಬಂಗಾಳದ ವಿಭಜನೆ ಮತ್ತು ಸ್ವಾತಂತ್ರ್ಯಹೋರಾಟದ ಮುನ್ನಡೆ

ಅ) ರಾಷ್ಟ್ರೀಯ ಕಾಂಗ್ರೇಸಿನಉದಯ:— ವಿಕ್ಟೋರಿಯಾ ರಾಣಿಯ ಪ್ರಸಿದ್ಧ ಪತ್ರಿಕೆಯಿಂದ ತಾತ್ಕಾಲಿಕ ಶಾಂತಿಯುಂಟಾಯಿತು. ಕ್ರಮೇಣ ಭಾರತೀಯರಲ್ಲಿ ಜಾಗ್ರತಿಯು ತೀವ್ರವಾಗಿ ಸಂಘ ಕಟ್ಟಿಕೊಂಡು ಬ್ರಿಟಿಷರ ವಿರುದ್ಧ ಹೋರಾಡಬೇಕೆಂಬ ಜ್ಞಾನವೂ ಹೆಚ್ಚಿತು ಆಗ 1885ರಲ್ಲಿ ಎ. ಓ. ಹೂಂ ಎಂಬ ಆಂಗ್ಲೇಯನು ರಾಷ್ಟ್ರೀಯ ಕಾಂಗ್ರಸನ್ನು ಸ್ಥಾಪಿಸಿದನು. ಅದಕ್ಕೆ ವೆಡ್ಡರ್‌ಬರ್ನ್, ಸಿ. ಬ್ಯಾನರ್ಜಿ ಮೊದಲಾದವರು ಸಹಾಯ ಕೊಟ್ಟರು.

ರಾಷ್ಟ್ರೀಯ ಕಾಂಗ್ರೇಸ್ ಆರಂಭದಲ್ಲಿ ಕೆಲವು ಬೇಡಿಕೆಗಳನ್ನು ಮುಂದಿಟ್ಟುಕೊಂಡು ಹೋರಾಟಕ್ಕೆ ತೊಡಗಿತು. ಆಗ ವೈಸರಾಯಿಯಾಗಿದ್ದ ಲಾರ್ಡ್ ಡಫರಿನ್‌ನು ಪ್ರಾರಂಭದಲ್ಲಿ ಕೆಲವು ಬೇಡಿಕೆಗಳಿಗೆ ಮನ್ನಣೆ ಕೊಟ್ಟರೂ ಕೊನೆ ಕೊನೆಗೆ ನಿರಾಕರಿಸುತ್ತಾ ಬಂದನು.

**ಲಾರ್ಡ್‌ಕರ್ಜನ್ ಮಾಡಿದ ಸುಧಾರಣೆಗಳು:–** 1) ವ್ಯವಸಾಯ ಇಲಾಖೆಯ ಸ್ಥಾಪನೆ 2) ಸಹಕಾರ ಸಂಘಗಳ ಸಂಘಟನೆ 3) ಪ್ರಾಚ್ಯ ಸಂಶೋಧನಾ ಶಾಖೆಯ ಸ್ಥಾಪನೆ 4) ರಾಷ್ಟ್ರೀಯ ಕಾಂಗ್ರೇಸನ್ನು ಕೊನೆಗೊಳಿಸುವ ಉದ್ದೇಶದಿಂದ ಬಂಗಾಳದ ವಿಭಜನೆ. ಇದರಿಂದ ವಂಗಭಂಗ ಚಳವಳಿಯುಂಟಾಯಿತು.

**ಸ್ವದೇಶೀ ಚಳವಳಿ:–** ಬಂಗಾಳದ ಅರವಿಂದಘೋಷ್, ಬಿಪಿನ ಚಂದ್ರಪಾಲ್, ಸುರೇಂದ್ರನಾಥಬ್ಯಾನರ್ಜಿ, ಪಂಜಾಬದ ಲಜಪತರಾವ್, ಮಹಾರಾಷ್ಟ್ರದ ತಿಲಕರೇ ಮೊದಲಾದವರು ಕರ್ಜನನಕೃತಿಯನ್ನು ಬಲವಾಗಿ ವಿರೋಧಿಸಿದರು. ಅವರಲ್ಲಿ ತಿಲಕರು ಸ್ವದೇಶೀವ್ರತದ ಕರೆಕೊಟ್ಟರು. ಸ್ವರಾಜ್ಯ ನನ್ನ ಆಜನ್ಮಸಿದ್ಧಹಕ್ಕು ಎಂದು ಘೋಷಿಸಿ ಜನರಲ್ಲಿ ಚೈತನ್ಯ ತುಂಬಿದರು. ಚಳವಳಿ ಬಿರುಸಾಗಿ ನಡೆಯಿತು. ಇದರಿಂದವರು ಆರು

ವರ್ಷಗಳ ಕಾರಾಗೃಹವಾಸಕ್ಕೆ ಹೋಗಬೇಕಾಯಿತು. ಹಾಗೆ ಅರವಿಂದರು ವಂಗವಿಭಜನೆಯನ್ನು ವಿರೋಧಿಸಿ ಸೆರೆಮನೆಗೆ ಹೋದರು. ಅಲ್ಲಿಂದ ಬಿಡಲ್ಪಟ್ಟು ಪಾಂಡಿಚೇರಿಯಲ್ಲಿ ಆಶ್ರಮಕಟ್ಟಿ ಅಧ್ಯಾತ್ಮಯೋಗಿಯಾದರು.

**ಕಾಂಗ್ರೇಸಿನ ಮುನ್ನಡೆ:—** ಕಾಂಗ್ರೇಸಿನ ಮುಖಂಡರೊಳಗೆ ಬ್ರಿಟಿಷರ ವಿರುದ್ಧ ಹೋರಾಡುವ ಬಗೆಗೆ ಎರಡು ಪಕ್ಷಗಳಾದುವು. 1. ಸೌಮ್ಯವಾದಿ ಪಕ್ಷ 2) ಉಗ್ರವಾದಿ ಪಕ್ಷ, ಹೀಗೆ ಎರಡು ಪಕ್ಷಗಳಾದರೂ ವಂಗಭಜನೆಯ ಹೋರಾಟವೇನೂ ನಿಲ್ಲಲಿಲ್ಲ. ಆದ್ದರಿಂದ 1911ರಲ್ಲಿ ಇಂಗ್ಲಾಂಡಿನ ಐದನೆ ಜಾರ್ಜರು ಬಂದು ಡಿಲ್ಲಿ ದರ್ಬಾರು ನಡೆಸಿ ವಂಗವಿಭಜನೆಯನ್ನು ರದ್ದುಪಡಿಸಿದರು. ಈ ಮಧ್ಯೆ ಭಾರತೀಯರ ಮನವೊಲಿಸಲು ಮಿಂಟೊಮೋರ್ಲೆ ಸುಧಾರಣೆಗಳು ಜಾರಿಗೆ ಬಂದುವು. ಇದರಲ್ಲಿ ಮುಸಲ್ಮಾನರಿಗೆ ಪ್ರತ್ಯೇಕ ಚುನಾವಣಾ ಕ್ಷೇತ್ರಗಳು ಮೀಸಲಾಗಿದ್ದುವು. ಇದರಿಂದ ಭಾರತೀಯರಿಗೆ ಸಮಾಧಾನವಾಗಲಿಲ್ಲ. ಚಳವಳಿ ನಡೆಯಿತು.

1914ರಲ್ಲಿ ಮೊದಲನೆ ವಿಶ್ವಸಂಗ್ರಾಮ ಆರಂಭವಾಯಿತು. ಆಗ ಬ್ರಿಟಿಷರು ಜವಾಬ್ದಾರಿಯುತ ಸರಕಾರ ಘೋಷಿಸುವ ಆಶ್ವಾಸನೆಕೊಟ್ಟರು. ಭಾರತೀಯರು ತನುಮನಧನಗಳಿಂದ ಸಹಾಯ ನೀಡಿದರು. 1916ರಲ್ಲಿ ಅನಿಬೆಸೆಂಟ್ ಅವರು ಹೋಂರೂಲ್‌ಲೀಗ್ ಸ್ಥಾಪಿಸಿ ಸ್ವಯಂ ಆಡಳಿತದ ಚಳವಳಿಯೆಬ್ಬಿಸಲು ಬ್ರಿಟಿಷರಿಂದ ಬಂಧಿಸಲ್ಪಟ್ಟು ಸೆರೆಮನೆ ಸೇರಿದರು. ಆ ಮೇಲೆ ಯುದ್ಧಾನಂತರ ಮೊಂಟ್‌ಫರ್ಡ್ ಸುಧಾರಣೆಗಳಾದುವು ಇದು ತೃಪ್ತಿಕರವಲ್ಲ. ಹೋರಾಟ ನಡೆಯಿತು. ಈ ವೇಳೆ ಖಿಲಾಫತ್ ಚಳವಳಿಯೂ ಆರಂಭವಾಯಿತು ಇದಕ್ಕೆ ಗಾಂಧಿಯವರ ನೇತೃತ್ವದಲ್ಲಿ ಕಾಂಗ್ರೆಸ್ ಸಂಸ್ಥೆಯು ಬೆಂಬಲ ಕೊಟ್ಟಿದೆ.

ಇ) I 1) ಬಂಗಾಳವು ರಾಷ್ಟ್ರೀಯತೆಯ ಕೇಂದ್ರವಾಗಿದ್ದು ಅದರ ಮುಂದಾಳುತನವು ಹೆಚ್ಚಾಗಿ ಹಿಂದುಗಳ ವಶದಲ್ಲಿತ್ತು. ಆಗ ಖರ್ಜನನು ಮುಸಲ್ಮಾನರನ್ನು ತನ್ನ ಕಡೆಗೆಳಕೊಂಡು ಕಾಂಗ್ರೇಸನ್ನು ಕೊನೆಗೊಳಿಸುವ ಉದ್ದೇಶವಿಟ್ಟುಕೊಂಡನು. ಹಾಗೆ ಆಡಳಿತವನ್ನು ಉತ್ತಮಗೊಳಿಸುವ

ನೆವನವನ್ನೊಡ್ಡಿ ಮುಸಲ್ಮಾನರು ಹೆಚ್ಚಾಗಿದ್ದುದು ಪೂರ್ವಬಂಗಾಳ, ಹಿಂದುಗಳು ಹೆಚ್ಚಾಗಿದ್ದುದು ಪಶ್ಚಿಮಬಂಗಾಳ ಎಂದು ಬಂಗಾಳವನ್ನು ಇಬ್ಭಾಗಿಸಿದನು.

2) ಬಂಗಾಳದ ವಿಭಜನೆಯಿಂದ ಮುಸಲ್ಮಾನರಿಗೆ ತೃಪ್ತಿಯಾದರೂ ತಿಲಕರೇ ಮೊದಲಾದವರು ಈ ಕೃತಿಯನ್ನು ವಿರೋಧಿಸಿದರು. ವಿದೇಶೀವಸ್ತುಗಳ ಬಹಿಷ್ಕಾರ - ಮಾರಾಟಗಳ ನಿಷೇಧ, ಸ್ವದೇಶೀಬಟ್ಟೆ ಇತ್ಯಾದಿಗಳ ಉಪಯೋಗ, ರಾಷ್ಟ್ರೀಯ ಶಾಲೆಗಳ ಸ್ಥಾಪನೆ, ಸ್ವದೇಶೀ ಪ್ರೇಮ ಇವುಗಳಿಂದ ಭಾರತದಲ್ಲಿ ರಾಷ್ಟ್ರಾಭಿಮಾನ ತುಂಬಿದರು. ಬ್ರಿಟನಿಗೆ ಹರಿದುಹೋಗುವ ಸಂಪತ್ತನ್ನು ತಡೆಗಟ್ಟುವುದಕ್ಕಾಗಿ ಸ್ವದೇಶೀ ಚಳವಳಿಯನ್ನಾರಂಭಿಸಿದರು.

3) ಬ್ರಿಟನ್‌ನ ರಾಜನಾದ ಐದನೆ ಜಾರ್ಜನು ಇಬ್ಭಾಗವಾದ ಬಂಗಾಲವನ್ನು ಪುನಃ ಒಂದು ಗೂಡಿಸಿದನು. ಭಾರತೀಯರನ್ನು ಸಮಾಧಾನಗೊಳಿಸುವುದಕ್ಕಾಗಿ ಭಾರತಕ್ಕೆ ಬಂದು ಡಿಲ್ಲಿಯಲ್ಲಿ ದರ್ಬಾರು ನಡೆಸಿದಾಗ 1911ರಲ್ಲಿ ಬಂಗಾಳದ ವಿಭಜನೆಯು ರದ್ದುಮಾಡಲ್ಪಟ್ಟಿತು. ಆ ಮೇಲೆ ಕಲ್ಕತ್ತಾ ರಾಜಧಾನಿ - ಡಿಲ್ಲಿಯೆಂದಾಯಿತು.

4) ಬಿಟಿಷರಾಡಳಿತೆಯಲ್ಲಿ ಅವರ ಹಿತಕ್ಕಲ್ಲದೆ ತಮ್ಮ ಹಿತಕ್ಕಲ್ಲವೆಂಬ ಭಾವನೆಯು ಭಾರತೀಯರಲ್ಲಿ ಬೆಳೆಯಿತು. ಪ್ರಥಮ ಸ್ವಾತಂತ್ರ್ಯಸಂಗ್ರಾಮದ ನಂತರ ತಮ್ಮಲ್ಲಿಂಟಾದ ಜಾಗ್ರುತಿಯು ಪ್ರಬಲವಾಗಿ ಸಂಘಸಂಸ್ಥೆಗಳನ್ನು ಕಟ್ಟಿಕೊಂಡು ಸುಸಂಘಟಿತರಾಗಿ ಕಾದಾಡಬೇಕೆಂಬ ಜ್ಞಾನ ಹೆಚ್ಚಿತು. ಆದ್ದರಿಂದ ಸರಕಾರದ ಲೋಪದೋಷಗಳನೆತ್ತಿ ತೋರಿಸಿ, ತಮ್ಮ ಬೇಡಿಕೆಗಳನ್ನು ಸರಕಾರದ ಮುಂದಿಡುವುದಕ್ಕಾಗಿ ರಾಷ್ಟ್ರೀಯ ಕಾಂಗ್ರೇಸ್ ಸ್ಥಾಪಿಸಲ್ಪಟ್ಟಿತು. ಇದನ್ನು ಏ ಓ. ಹ್ಯೂಂ ಎಂಬ ನಿವೃತ್ತ ಆಂಗ್ಲ ಅಧಿಕಾರಿಯು (1885) ಸ್ಥಾಪಿಸಿದನು.

5) ಭಾರತೀಯರ ಎಲ್ಲ ಮಕ್ಕಳಿಗೂ ವಿದ್ಯಾಭ್ಯಾಸ ಕೊಡಿಸುವುದು, ಬಡವರ ಮೇಲಿನ ತೆರಿಗೆಯನ್ನು ಕಮ್ಮಿಮಾಡುವುದು, ಆಡಳಿತದ ಹಿರಿಯ

ಹುದ್ದೆಗಳಿಗೆ ಭಾರತೀಯರನ್ನು ನೇಮಿಸುವುದು, ಬ್ರಿಟಿಷ್ ಸೈನ್ಯದ ವೆಚ್ಚ ಕಡಿಮೆ ಮಾಡುವುದು, ಭಾರತೀಯರಿಗೆ ಆಡಳಿತದಲ್ಲಿ ತರಬೇತಿ ಕೊಡುವುದು.

II 1) ಹೋಂರೂಲ್ (ಸ್ವಯಂ ಆಡಳಿತ) ಚಳವಳಿ ಕ್ರಿ. ಶ. 1916 ರಲ್ಲಿ ನಡೆಯಿತು. ಐರಿಷ್‌ಮನೆತನದ ಶ್ರೀಮತಿ ಅನಿಬೆಸೆಂಟ್ ಅವರು ಆರಂಭಿಸಿದ ಚಳವಳಿಯಿದು. ಅದಕ್ಕಾಗಿ ಹೋಂರೂಲ್ ಲೀಗ್ ಸ್ಥಾಪಿಸಿ, ನ್ಯೂ ಇಂಡಿಯಾ ಪತ್ರಿಕೆಯ ಮೂಲಕ ಸ್ವಯಮಾಡಳಿತ ಸ್ಥಾಪಿತವಾಗಬೇಕೆಂದು ಪ್ರಚಾರ ಮಾಡಿದುದರಿಂದ ಆ ಚಳವಳಿಯು ಇಡೀ ದೇಶವೆಲ್ಲ ವ್ಯಾಪಿಸಿತು. ಇದರಿಂದವರನ್ನು ಬ್ರಿಟಿಷ್ ಸರಕಾರವು ಸೆರೆಯಲ್ಲಿಟ್ಟಿದೆ.

2) ಮೊದಲನೆ ಮಹಾಯುದ್ಧದಲ್ಲಿ ಟರ್ಕಿಯು ಶತ್ರುಪಕ್ಷವಾಗಿತ್ತು. ಬ್ರಿಟಿಷರು ವಿಜಯಿಗಳಾದ ಮೇಲೆ ಟರ್ಕಿ ಸಾಮ್ರಾಜ್ಯವನ್ನು ಛಿದ್ರಗೊಳಿಸಿ ಖಲೀಪರ ಸ್ಥಾನಮಾನಗಳನ್ನು ಕಿತ್ತೆಸೆದರು. ಅದಕ್ಕಾಗಿ ಭಾರತದಲ್ಲಿದ್ದ ಮುಸಲ್ಮಾನರು ಗುರುಗಳ ಸ್ಥಾನಮಾನಕ್ಕಾಗಿ ಹೂಡಿದ ಚಳವಳಿಗೆ ಖಿಲಾಪತ್ ಚಳವಳಿಯೆನ್ನುವರು. ಇದು ರಾಷ್ಟ್ರೀಯ ಹೋರಾಟಕ್ಕೆ ನೆರವಾದುದರಿಂದ ಗಾಂಧಿಗಳ ನೇತೃತ್ವದಲ್ಲಿದ್ದ ಕಾಂಗ್ರೇಸ್ ಬೆಂಬಲ ಕೊಟ್ಟಿರುವುದು.

3) 1918ರಲ್ಲಿ ಮಹಾಯುದ್ಧವು ನಿಂತಿತ್ತು. ಆಗ ಬ್ರಿಟಿಷ್ ಸರಕಾರವು ಇದುವೆ ಸ್ವರಾಜ್ಯದ ಹೆಜ್ಜೆಯೆಂಬಂತೆ ಭಾರತೀಯರಿಗೆ ಕೊಟ್ಟ ಅಧಿಕಾರಗಳಿವು:- ಇವುಗಳಿಂದ 1) ಭಾರತೀಯರು ಚುನಾಯಿತ ಸದಸ್ಯರಾಗಿ ಶಾಸನಸಭೆಗಳಲ್ಲಿ ಸೇರುವಂತಾಯಿತು 2) ಖಾತೆಗಳಲ್ಲಿ ಕಾದಿಟ್ಟವು, ವರ್ಗಾಯಿಸಲ್ಪಟ್ಟವು ಎಂದು ಎರಡು ವಿಭಾಗಗಳಾದುವು 3) ಪ್ರಾಂತಗಳಲ್ಲಿ ಹಣಕಾಸು ಮೊದಲಾದ ಒಳಾಡಳಿತದ ಖಾತೆಗಳನ್ನು ಗವರ್ನರರು ನೋಡಿಕೊಳ್ಳುವುದು. 4) ಆರೋಗ್ಯ, ಶಿಕ್ಷಣ, ಮೊದಲಾದುವುಗಳನ್ನು ಜನತಾ ಪ್ರತಿನಿಧಿಗಳಿಗೆ ಒಪ್ಪಿಸಲ್ಪಟ್ಟುವು. ಹೀಗೆ ರಾಜ್ಯಾಡಳಿತವು ದ್ವಂದ್ವಸರಕಾರವಾಗಿ ನಡೆಯಬೇಕಾದುದರಿಂದ ಭಾರತೀಯರು ನಿರಾಸೆಪಟ್ಟರು.

4) ಒಂದು ಉಗ್ರವಾದಿಬಣ - ಮುಖಂಡರು ಲೋಕಮಾನ್ಯತಿಲಕರು, ಲಜಪತರಾಯರು, ಬಿಪಿನಚಂದ್ರಪಾಲಾದಿಗಳು. ಬ್ರಿಟಿಷರ ಜೊತೆಗೆ

ಯಾವುದೇ ಒಪ್ಪಂದದ ಮೂಲಕ ಸ್ವರಾಜ್ಯಪ್ರಾಪ್ತಿ ಸಾಧ್ಯವಲ್ಲವೆಂದು ಅವರ ಭಿಪ್ರಾಯ 2 ಸೌಮ್ಯವಾದಿ ಬಣ - ಗೋಪಾಲಕೃಷ್ಣ ಗೋಖಲೆ, ಮೆಹಾಥಾ ಮೊದಲಾದವರು. ಬ್ರಿಟಿಷರೊಡನೆ ಸಂಧಾನ ಹಾಗೂ ಒಪ್ಪಂದದ ಮೂಲಕ ಕಾನೂನು ಬದ್ಧವಾಗಿಯೇ ಸ್ವಾತಂತ್ರ್ಯ ಸಂಪಾದಿಸಬೇಕೆಂಬುದು ಇವರ ಭಿಪ್ರಾಯ. ಚಳವಳಿಯಲ್ಲಿ ಹಿಂದೆ ಸರಿದರು.

| III ಸಭೆನಡೆದ ಸ್ಥಃ | ಕಾಲ | ಅಧ್ಯಕ್ಷರು |
|---|---|---|
| ಬೊಂಬಾಯಿ | 1885 | W. C. ಬ್ಯಾನರ್ಜಿ |
| ಕಲ್ಕತ್ತಾ | 1886 | ದಾದಾಬ್ಯಾನೌರೋಜಿ |
| ಮದ್ರಾಸ್ | 1887 | ಬಿ ತಯ್ಯಬ್ಜಿ |
| ಅಲಹಾಬಾದ್ | 1888 | ಜಾರ್ಜ್‌ಯುಲೆ |
| ಬೊಂಬಾಯಿ | 1889 | ಸರ್ ವೆಡ್ಡರ್ ಬರ್ನ್ |
| ಕಲ್ಕತ್ತಾ | 1890 | P. C. ಮೆಹತಾ |
| ನಾಗಪುರ | 1891 | P. ಆನಂದಾಚಾರ್ಲು |
| ಅಲಹಾಬಾದ್ | 1892 | W. C. ಬ್ಯಾನರ್ಜಿ |
| ಲಾಹೋರ್ | 1893 | ದಾದಾಬ್ಯಾನವರೋಜು |
| ಮದ್ರಾಸ್ | 1894 | ಆಲ್ಫ್ರೆಡ್ ವೆಬ್ |

ಉ) ಮಿಂಟೋಮೋರ್ಲೇ ಸುಧಾರಣೆಗಳು:—

ಸರಕಾರದಿಂದ ನೇಮಿಸಲ್ಪಟ್ಟ ಸಭೆಗಳಲ್ಲಿ ಭಾರತೀಯರಿಗೆ ಹೆಚ್ಚಿನ ಸ್ಥಾನ ಕೊಡುವುದು. ಚುನಾಯಿತ ಸದಸ್ಯರಿಗೆ ಸರಕಾರದ ಲೋಪದೋಷಗಳನ್ನು ಎತ್ತಿತೋರಿಸುವುದಕ್ಕೂ ಆಯವ್ಯಯ ಪಟ್ಟಿಯ ಮೇಲೆ ಚರ್ಚಿಸುವುದಕ್ಕೂ ಎಡೆಕೊಡುವುದು. ಆದರೆ ಹಿಂದೂ - ಮುಸಲ್ಮಾನರಿಗೆ ಬೇರೆಬೇರೆ ಮತದಾರ ಕ್ಷೇತ್ರಗಳನ್ನು ನಿರ್ಮಿಸಲಾಗುವುದು. ಇದರಿಂದ ಅತೃಪ್ತಿಯುಂಟಾಗಿ ಕಾಂಗ್ರೆಸ್ ಚಳವಳಿ ನಡೆಯಿತು.

3. **ತಿಲಕರು ನಡೆಸಿದ ಚಳವಳಿಯ ಕಾರ್ಯಕ್ರಮಗಳು:—**

1) ಭಾರತೀಯರು ಸ್ವದೇಶೀವಸ್ತುಗಳನ್ನು ಬಳಸಿ ವಿದೇಶೀ ವಸ್ತು

ಗಳನ್ನು ಬಹಿಷ್ಕರಿಸಬೇಕೆಂದು ಸ್ವದೇಶೀಚಳವಳಿಯನ್ನಾರಂಭಿಸಿದರು. 2) ಭಾರತೀಯ ಮಕ್ಕಳಲ್ಲಿ ಭಾರತೀಯತೆ ತುಂಬುವಂತೆ ರಾಷ್ಟ್ರೀಯ ಶಾಲೆಗಳನ್ನು ತೆರೆದರು. ಡೆಕ್ಕಾನ್ ಎಡ್ಯುಕೇಶನ್ ಸೊಸೈಟಿಯಾಶ್ರಯದಲ್ಲಿ ರಾಷ್ಟ್ರೀಯ ಶಿಕ್ಷಣಕೊಡುವ ಶಾಲಾ - ಕಾಲೇಜನ್ನು ನಡೆಸಿದರು. 3) ಕೇಸರಿ, ಮರಾಠಾ ಪತ್ರಿಕೆಗಳ ಮೂಲಕ ಜನಜಾಗ್ರುತಿ ಹುಟ್ಟಿಸಿದರು. 4) ಶಿವಾಜಿಜಯಂತಿ, ಗಣೇಶೋತ್ಸವ ಮೊದಲಾದ ಉತ್ಸವಗಳಿಗೆ ರಾಷ್ಟ್ರೀಯತೆಯ ಸ್ವರೂಪ ಕೊಟ್ಟರು. 5) ಸ್ವರಾಜ್ಯನನ್ನು ಜನ್ಮಸಿದ್ಧಹಕ್ಕು ಎಂದು ಘೋಷಿಸಿ ಜನಜನರಲ್ಲಿ ರಾಷ್ಟ್ರಾಭಿ ಮಾನ ಹುಟ್ಟಿಸಿದರು.

## 9) ಸ್ವಾತಂತ್ರ್ಯ ಹೋರಾಟವಲ್ಲಿ ಗಾಂಧೀಜಿಯವರ ಪಾತ್ರ

ಅ) ಗಾಂಧೀಜಿಯವರ ಜನನ 2-10-1869. ಹುಟ್ಟೂರು ಗುಜರಾತಿನ ಕಾಥೇವಾಡದ ಪೋರ್‌ಬಂದರು. ತಂದೆ - ಕರಮುಚಂದರು, ತಾಯಿ ಪ್ರುತ್ಲೀದೇವಿ. ಪತ್ನಿ - ಕಸ್ತೂರೀಬಾಯಿ ಗಾಂಧಿಯವರು 19ನೆ ವಯಸ್ಸಿನಲ್ಲಿ ಇಂಗ್ಲಾಂಡಿಗೆ ಹೋಗಿ ನ್ಯಾಯಶಾಸ್ತ್ರ ಕಲಿತು ಭಾರತಕ್ಕೆ ಬಂದಮೇಲೆ ವಕೀಲ ವೃತ್ತಿಯನ್ನಾರಂಭಿಸಿದರು. ಮತ್ತೆ ಅಬ್ದುಲ್ಲ ಎಂಬ ಕಕ್ಷಿಗಾರನ ಪರವಾಗಿ ಆಫ್ರಿಕಕ್ಕೆ ಹೋಗಿ ಭಾರತೀಯರ ಮೇಲಾಗುತ್ತಿದ್ದ ಅನ್ಯಾಯವನ್ನು ಪ್ರತಿಭಟಿಸಿ ಸತ್ಯಾಗ್ರಹ ಹೂಡಿದರು. ಆ ಮೇಲೆ ಭಾರತಕ್ಕೆ ಬಂದು ಸ್ವಾತಂತ್ರ್ಯ ಚಳವಳಿಯಲ್ಲಿ ಸೇರಿ ಸಫಲರಾದರು. ಅಂದಿನಿಂದ ಗಾಂಧಿಯುಗ ಆರಂಭವಾಯಿತು.

1919ರಲ್ಲಿ ಭಾರತೀಯರ ಹೋರಾಟ ನಿಲ್ಲಿಸಲು ರೌಲೆಟ್ ಕಾಯಿದೆ ಜಾರಿಯಾಯಿತು. ಇದನ್ನು ಪ್ರತಿಭಟಿಸಿ ಅಲ್ಲಲ್ಲಿ ಸಭೆಗಳಾದವು. ಜಲಿಯನ್ ವಾಲಾಭಾಗದಲ್ಲಿ ಸಭೆ ನಡೆಯುತಿದ್ದಾಗ ಡಯರ್ ಎಂಬ ಅಧಿಕಾರಿಯು ಗುಂಡಿನಮಳೆಗೆರೆದನು. ಅನೇಕರನ್ನು ಕೊಂದನು. ಆಗ ಗಾಂಧೀಜಿಯವರು ರೌಲೆಟ್ ಕಾಯಿದೆ ರದ್ದುಪಡಿಸುವಂತೆ ಚಳವಳಿ ಹೂಡಿದರು

ನಾಗಪುರ ಅಧಿವೇಶನದಲ್ಲಿ ಗಾಂಧೀಜಿಯವರೇ ಮುಖಂಡರಾಗಿ ಆರಿಸಲ್ಪಟ್ಟಾಗ ಅಸಹಕಾರ ಚಳವಳಿ ನಡೆಯಿತು. ಇದನ್ನು ಹತ್ತಿಕ್ಕಲು ಬ್ರಿಟಿಷ್ ಅಧಿಕಾರಿಗಳು ಹಿಂಸಾತ್ಮಕ ವಿಧಾನಗಳನ್ನು ಕೈಕೊಂಡುದರಿಂದ ಜನತೆಯು ಸಹನೆ ತಪ್ಪಿ ಚೌರಿ ಎಂಬಲ್ಲಿ ಪೋಲಿಸ್‌ಠಾಣೆಯನ್ನೇ ಸುಟ್ಟುಬಿಟ್ಟಿತು.

ಆಗ ಗಾಂಧೀಜಿಯವರು ಆ ಚಳವಳಿಯನ್ನು ಅಲ್ಲಿಗೆ ನಿಲ್ಲಿಸಿಬಿಟ್ಟರು. ಆದರೂ ಆರುವರ್ಷಗಳ ಶಿಕ್ಷೆ ವಿಧಿಸಲ್ಪಟ್ಟಿದೆ.

ಗಾಂಧೀಜಿಯವರ ಹೋರಾಟ ನಿಂತರೂ ಮೋತೀಲಾಲ್ ಮೊದಲಾದವರು ಮೊಂಟೆಗೋಸುಧಾರಣೆಗಳನ್ನು ಮುರಿಯುವುದಕ್ಕಾಗಿ ಸ್ವರಾಜ್ಯಪಕ್ಷ ಕಟ್ಟಿದರು. ಆಗ ಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮಗಳು ಆರಂಭಿಸಲ್ಪಟ್ಟವು. 1927ರಲ್ಲಿ ಬ್ರಿಟಿಷ್ ಸರಕಾರದಿಂದ ನೇಮಿಸಲ್ಪಟ್ಟ ಸೈಮನ್‌ಕಮಿಶನ್ ಭಾರತಕ್ಕೆ ಬಂತು. ಈ ವೇಳೆ ಲಾಲಾಲಜಪತರಾಯರು ಪೋಲಿಸರ ಲಾಠಿಪ್ರಹಾರದಿಂದ ಕೆಡಹಲ್ಪಟ್ಟಾಗ ಸ್ವಾತಂತ್ರ್ಯದ ಹೋರಾಟವು ಬಿರುಸಾಗಿ ಮುಂದುವರಿಯಿತು.

1929ರಲ್ಲಿ ಲಾಹೋರ್ ಕಾಂಗ್ರೇಸ್ ಅಧಿವೇಶನ ನಡೆದಮೇಲೆ ಗಾಂಧೀಜಿಯವರು ಸವಿನಯ ಕಾಯಿದೆ ಭಂಗದ ಚಳವಳಿಗಿಳಿದರು. ಉಪ್ಪಿನ ಸತ್ಯಾಗ್ರಹದ ನಿಮಿತ್ತ ಕಾರಾಗೃಹವನ್ನೂ ಕಂಡರು. ಆದರೂ ವಿದೇಶೀಬಹಿಷ್ಕಾರ, ಕರನಿರಾಕರಣ ಮೊದಲಾದ ಚಳವಳಿಗಳು ಅಲ್ಲಲ್ಲಿ ನಡೆಯುತ್ತಲೇ ಇದ್ದವು. ಆಗ ಬ್ರಿಟಿಷ್ ಸರಕಾರವು ಸ್ವರಾಜ್ಯದ ಬೇಡಿಕೆಯನ್ನು ಪರಿಶೀಲಿಸುವುದಕ್ಕಾಗಿ ಲಂಡನಿನಲ್ಲಿ ದುಂಡುಮೇಜಿನ ಪರಿಷತ್ತುಗಳನ್ನು ಕರೆಯಿತು. ಗಾಂಧೀಜಿಯವರು ಎರಡನೆ ಪರಿಷತ್ತಿಗೆ ಮಾತ್ರ ಕಾಂಗ್ರೇಸಿನ ಪ್ರತಿನಿಧಿಯಾಗಿ ಹೋಗಿ ಭಾಗವಹಿಸಿದ್ದರು. ಯಾವುದೂ ನಿರ್ಧಾರವಾಗಿಲ್ಲ. ಆದರೆ ಮೂರನೆ ಪರಿಷತ್ತು ಭಾರತದ ಮುಂದಿನ ಆಡಳಿತದ ರೂಪರೇಷೆಗಳಿಗೆ ಸ್ವಲ್ಪಮಟ್ಟಿಗೆ ಒಪ್ಪಿಗೆ ಕೊಟ್ಟಿದೆ.

ಇ) [ 1) ಗಾಂಧೀಜಿಯವರು ಅಬ್ದುಲ್ಲಾ ಎಂಬ ಕಕ್ಷಿಗಾರನ ಪರವಾಗಿ ನ್ಯಾಯಾಲಯದಲ್ಲಿ ವಾದಿಸಲು ಆಫ್ರಿಕಕ್ಕೆ ಹೋದರು. ಆಗ ಅಲ್ಲಿದ್ದ ಭಾರತೀಯರ ಸ್ಥಿತಿ ಚೆನ್ನಾಗಿರಲಿಲ್ಲ. ಅವರಿಗಾಗುತ್ತಿದ್ದ ಕಿರುಕುಳ ತಪ್ಪಿಸಲು ಸತ್ಯಾಗ್ರಹವೆಂಬ ಹೋರಾಟವನ್ನು ಅಲ್ಲಿನ ಸರಕಾರದ ವಿರುದ್ಧವಾಗಿ ನಡೆಸಿ ಯಶಸ್ವಿಯಾದರು. ಇದರಿಂದ ಭಾರತೀಯರ ದುಸ್ಥಿತಿ ಸ್ವಲ್ಪಮಟ್ಟಿಗೆ ಸುಧಾರಿಸಿತು.

2) ಸತ್ಯಮಾರ್ಗ ಬಿಡಬಾರದು. ಯಾವ ಹಿಂಸೆಗೂ ಎಡೆ ಕೊಡಬಾರದು. ಎಷ್ಟೇ ಕಷ್ಟ ಬಂದರೂ ಎದೆಗೆಡದೆ ಹೋರಾಟ ನಡೆಸುವುದೇ ಸತ್ಯಾಗ್ರಹದ ತಿರುಳು. ಇದನ್ನು ಗಾಂಧೀಜಿಯವರು ದಕ್ಷಿಣಾಫ್ರಿಕದಲ್ಲಿ ಮೊದಲಾಗಿ ಪ್ರಯೋಗಿಸಿದರು.

3) ಭಾರತದಲ್ಲಿ ಸಾಮಾಜಿಕ - ಆರ್ಥಿಕಪ್ರಗತಿಯಾಗದೆ ರಾಜಕೀಯ ಸ್ವಾತಂತ್ರ್ಯವು ನೆನಸಾಗದು. ಈ ದೃಷ್ಟಿಯಿಂದ ಗಾಂಧೀಜಿಯವರು ಕೈಕೊಂಡ ಕಾರ್ಯಗಳು. 1) ಅಸ್ಪೃಶ್ಯತಾ ನಿವಾರಣೆ (ಹರಿಜನರಿಗೆ ಸರಿ ಸಮಾನತೆ ಕೊಡಲು ಶ್ರಮಿಸಿದರು. 2) ಸ್ವದೇಶೀ ತತ್ವಗಳ ಪ್ರಚಾರ ಬಡತನ - ನಿರುದ್ಯೋಗ ನಿವಾರಣೆಗಾಗಿ 3) ಸ್ವಾವಲಂಬನಕ್ಕಾಗಿ ಚರಕದ ಉಪಯೋಗ 4) ಗ್ರಾಮೋದ್ಯೋಗ ಪುನರುಜ್ಜೀವನ (ಆಶ್ರಮಗಳನ್ನು ಸ್ಥಾಪಿಸಿ ಜನಸೇವಕರಿಗೆ ತರಬೇತು ಕೊಟ್ಟರು).

4) ದುಂಡುಮೇಜಿನ ಪರಿಷತ್ತು ನಡೆದುದು ಇಂಗ್ಲಾಂಡಿನಲ್ಲಿ; ಮೂರು ಸಾರಿ ನಡೆಯಿತು. ಭಾರತೀಯರ ಸ್ವಾತಂತ್ರ್ಯ ಹೋರಾಟ ತೀವ್ರಗೊಳುತ್ತಿರುವುದನ್ನು ಕಂಡು ಬ್ರಿಟಿಷ್ ಸರಕಾರವು ಸ್ವರಾಜ್ಯದ ಬೇಡಿಕೆಗಳನ್ನು ಪರಿಶೀಲಿಸಿ, ಚರ್ಚಿಸುವುದಕ್ಕಾಗಿ ಈ ಪರಿಷತ್ತುಗಳನ್ನು ಕರೆದಿತ್ತು.

II 1) ಮೊಂಟ್‌ಫರ್ಡ್‌ಧೋರಣೆಗಳ ವಿರುದ್ಧ ಭಾರತೀಯರು ನಡೆಸಿದ ಹೋರಾಟವನ್ನು ಹತ್ತಿಕ್ಕುವುದಕ್ಕಾಗಿ ಬ್ರಿಟಿಷ್ ಸರಕಾರವು ಜ್ಯಾರಿ ಮಾಡಿದ ರೌಲೆಟ್ ಕಾಯಿದೆಯಿದು. ಈ ಕಾಯಿದೆಯಿಂದ ಅಧಿಕಾರಿಗಳು ಸರಕಾರಕ್ಕೆ ಬೇಡವಾದವರನ್ನು ರಾಜದ್ರೋಹಿ ಯೆಂದು ನಿರ್ಣಯಿಸಿ ಯಾವ ವಿಚಾರಣೆ ಯಿಲ್ಲದೆ ಸೆರೆಯಲ್ಲಿಡಬಹುದು.

2) ಬ್ರಿಟಿಷರ ಅನ್ಯಾಯದ ಕಾಯಿದೆಗಳನ್ನು ಮೀರಿ, ತಮ್ಮ ಅಸಮಾಧಾನವನ್ನು ತೋರಿಸುವ ಉದ್ದೇಶದಿಂದ ಗಾಂಧೀಜಿಯವರು 1930ರಲ್ಲಿ ಸವಿನಯ ಕಾಯಿದೆ ಭಂಗ ಚಳವಳಿಯನ್ನಾರಂಭಿಸಿದರು. ಅದರ ಅಂಗವಾಗಿ ತನ್ನ ಅನುಯಾಯಿಗಳೊಡನೆ ದಾಂಡಿಗೆ ಹೋಗಿ ಅದೇ ಎಪ್ರಿಲ್ ಆರರಂದು ಸ್ವತಃ ಉಪ್ಪು ತಯಾರಿಸಿದರು. ಇದಕ್ಕಾಗಿ ಅವರಿಗೂ ಕಾಂಗ್ರೆಸ್ ಮುಖಂಡರಿಗೂ ಶಿಕ್ಷೆ ವಿಧಿಸಲ್ಪಟ್ಟಿದೆ. ಇದುವೇ ಉಪ್ಪಿನ ಸತ್ಯಾಗ್ರಹ.

3) ಗಾಂಧಿಯವರು ಚೌರಿಚೌರಾ ದುರಂತದ ದುಷ್ಪರಿಣಾಮ ದಿಂದಾಗಿ ತಮ್ಮ ಚಳವಳಿಯನ್ನು ನಿಲ್ಲಿಸಿಬಿಟ್ಟರು. ಇದು ಕೆಲವರಿಗೆ ಸರಿಗಾಣ ಲಿಲ್ಲ. ಆದಕ್ಕಾಗಿ ಮೋತಿಲಾಲರು, ಚಿತ್ತರಂಜನದಾಸ್ ಮೊದಲಾದವರು ಕಟ್ಟಿದ ಪಕ್ಷವೇ ಸ್ವರಾಜ್ಯಪಕ್ಷ. ಶಾಸನ ಸಭೆಗಳಿಗೆ ಚುನಾಯಿತರಾಗಿ ಆ ಮೂಲಕ ಸರಕಾರದ ಆಡಳಿತೆಗೆ ಅಡ್ಡಿಯೊಡ್ಡಿ ಮೊಂಟೆಗೋಸುಧಾರಣೆ ಗಳನ್ನು ಮುರಿಯಬೇಕೆಂಬುದೇ ಅವರ ಉದ್ದೇಶ.

4) ಲಾಹೋರ್ ಕಾಂಗ್ರೆಸ್ ಅಧಿವೇಶನ 1929ರಲ್ಲಿ ನಡೆದಿದೆ. ಅಂದು ಜವಾಹರಲಾಲ್ ನೆಹರೂರವರು ಅಧ್ಯಕ್ಷರಾಗಿ ಸಂಪೂರ್ಣ ಸ್ವಾತಂತ್ರ್ಯವೇ ನಮ್ಮ ಗುರಿಯೆಂದು ಸಾರಿದ್ದರು. ಹಾಗೆ ಗುರಿ ಮುಟ್ಟುವ ತನಕ ವಿಶ್ರಮಿಸುವುದಿಲ್ಲೆಂದು 26-1-1930ರಲ್ಲಿ ಪ್ರತಿಜ್ಞೆಯನ್ನೂ ಕೈಕೊಂಡರು. ಅಂತಹ ಪ್ರತಿಜ್ಞಾ ದಿನವು ಕಾಂಗ್ರೆಸ್ ಇತಿಹಾಸದಲ್ಲಿ ಚಿರಸ್ಮರಣೀಯವಿದೆ. ಕಾರಣ- ೨೦ ವರ್ಷಗಳ ನಂತರ ಅದೇದಿನ 26ರಂದು ಭಾರತದ ಗಣರಾಜ್ಯೋದಯವಾಗಿದೆ.

5) ಬಾರ್ಡೋಲಿಯೂ ಗುಜರಾತಿನಲ್ಲಿದೆ. ಇಲ್ಲಿ ಮಹಾತ್ಮರ ಸವಿ ನಯ ಕಾಯಿದೆಭಂಗ ಚಳವಳಿಯ ಕಾಲದಲ್ಲಿ ಅವರ ಆದೇಶದಂತೆ ಕರನಿ ರಾಕರಣ ಚಳವಳಿ ನಡೆದಿದೆ. ಈ ಹೋರಾಟದ ಮುಖಂಡತ್ವವು ವಲ್ಲಭಬಾಯಿ ಪಟೇಲರಿಂದಾಗಿ ಬಿರುಸಾಗಿ ಸಾಗಿತ್ತು. ಅದಕ್ಕಾಗಿ ಸರ್ (ಸರದಾರ) ಎಂಬ ಬಿರುದು ಅವರಿಗೆ ಬಂದಿದೆ.

III 1) ಗಾಂಧೀಜಿ ಜನನ 2) ಗಾಂಧೀಜಿ ಆಫ್ರಿಕದಿಂದ ತಿರುಗಿದುದು 3) ಜುಲಿಯನ್ ವಾಲಾಬಾಗ್ 4) ಉಪ್ಪಿನ ಸತ್ಯಾಗ್ರಹ 5) ಎರಡ ನೆಯ ದುಂಡುಮೇಜಿನ ಪರಿಷತ್ತು.

ಉ) ಬಿಟ್ಟ ಶಬ್ದಗಳನ್ನು ತುಂಬಿಸುವುದು.:—

ಅ) ಗಾಧೀಜಿಯವರು—ಮತ್ತು—ಆಶ್ರಮಗಳನ್ನು ಸ್ಥಾಪಿಸಿ ತರಬೇತಿ ಕೊಟ್ಟರು. (ಸಬರ್ಮತಿ, ಸೇವಾಗ್ರಾಮ ಆ) ಉಪ್ಪಿನ ಸತ್ಯಾಗ್ರಹದಲ್ಲಿ ಕರ್ಣಾಟಕದ— ರೂ ಒಬ್ಬರು. ಶ್ರೀಮತಿ — ಮತ್ತು — ಯವರೂ ಭಾಗ ವಹಿಸಿದ್ದರು. (ಮಹಾದೇವಪ್ಪ ಮೈಲಾರ, ಸರೋಜನಿನಾಯ್ಡು, ವಿನೋದಾ ಬಾವೆ ಇ) ಆಗ ಮೈಸೂರು ರಾಜ್ಯದ — — ಇವು ಸತ್ಯಾಗ್ರಹದ

ಕೇಂದ್ರಗಳು (ಶಿರಸಿ, ಅಂಕೋಲಾ) ಈ) ಎರಡನೆ — ಪರಿಷತ್ತಿನ ನಿರ್ಣಯ ದಲ್ಲಿ — ಪ್ರತ್ಯೇಕ ಪ್ರಾತಿನಿಧ್ಯಕೊಡಲಾಗಿತ್ತು (ದುಂಡುಮೇಜು, ಹರಿಜನರಿಗೆ)

ಉ) 1931ರಲ್ಲಿ ಇಲ್ಲಿನ ವೈಸರಾಯಿ — ಮತ್ತು – ಅವರೊಡನೆ ಪೂನಾ ಒಪ್ಪಂದ ನಡೆಯಿತು (ಲಾರ್ಡ್‌ಇರ್ವಿನ್, ಮಹಾತ್ಮಾಗಾಂಧೀಜಿ)

**ಟಿಪ್ಪಣಿ ಬರೆಯುವುದು** 1. ಜುಲಿಯನ್‌ವಾಲಾಬಾಗ್ ಹತ್ಯಾ ಕಾಂಡ 2) ಚೌರಿಚೌರಾ ದುರಂತ 3) ಸೈಮನ್ ಸಮಿತಿ 4) ದುಂಡು ಮೇಜಿನ ಪರಿಷತ್ತುಗಳು.

1) ಅಮೃತಸರದ ಬಳಿ ಜುಲಿಯನ್‌ವಾಲಾಬಾಗದಲ್ಲಿ ಜನರಲ್ ಡಯರ್ ಎಂಬ ಸೇನಾಪತಿಯು ನಡೆಸಿದ ಹತ್ಯಾಕಾಂಡವಿದು. ಸರಕಾರದ ದಬ್ಬಾಳಿಕೆಯ ನಿರೋಧಕ್ಕಾಗಿ ಸಾವಿರಾರು ಭಾರತೀಯರು ಒಂದು ಉದ್ಯಾನ ದಲ್ಲಿ ಸಭೆಕೂಡಿದ್ದರು ಆಗ ಸೈನಿಕರು ಆ ಮಾರ್ಗದ್ವಾರದಲ್ಲಿ ಇದಿರು ನಿಂತು ಗುಂಡು ಹಾರಿಸಿದ್ದರಿಂದ ನೂರಾರು ಜನರ ಕಗ್ಗೊಲೆಯಾಯಿತು.

2) ಉತ್ತರಪ್ರದೇಶದ ಗೋರಕ್‌ಪುರದ ಬಳಿಯಲ್ಲಿ ನಡೆದ ದುರ್ಘಟನೆ ಯಿದು. ಗಾಂಧಿಯವರ ಅಸಹಕಾರ ಚಳವಳಿಯ ಕಾಲದಲ್ಲಿ ಕೆಲವರು ಶಿಕ್ಷಿಸಲ್ಪಟ್ಟರು. ಆಗ ಸಹನೆ ತಪ್ಪಿದ ಭಾರತೀಯರು ಬ್ರಿಟಿಷರ ಹಿಂಸಾತ್ಮಕ ವಿಧಾನಗಳನ್ನು ವಿರೋಧಿಸಿ ಚೌರಿಚೌರಾದಲ್ಲಿ ಪೋಲಿಸ್ ಠಾಣ್ಯವನ್ನು ಮುತ್ತಿ ಸುಟ್ಟುಹಾಕಿದರು. ಕೆಲವು ಪೋಲಿಸರು ಬೆಂದು ಹೋದರು. ಇದರಿಂದ ಗಾಂಧಿಯವರ ಅಸಹಕಾರ ಚಳವಳಿಯು ನಿಲ್ಲಿಸಲ್ಪಟ್ಟಿದೆ.

3) ಸರ್‌ಜಾನ್ ಸೈಮನರೇ ಅಧ್ಯಕ್ಷರಾಗಿರುವ ಆರು ಮಂದಿ ಬ್ರಿಟಿಷರಿಂದ ಕೂಡಿದ ಸಮಿತಿಯಿದು. ಈ ಸಮಿತಿಯು ಮೊಂಟೆಗೋಸು ಸುಧಾರಣೆಗಳ ಫಲಿತಾಂಶವನ್ನೂ ಭಾರತದ ಪರಿಸ್ಥಿತಿಯನ್ನೂ ಪರಿಶೀಲಿಸುವು ದಕ್ಕಾಗಿ (1927) ಭಾರತಕ್ಕೆ ಬಂದಿತು. ಆದರೆ ಆ ಸಮಿತಿಯಲ್ಲಿ ಎಲ್ಲರೂ ಬಿಳಿಯರಾದಕಾರಣ ಭಾರತೀಯರು ಕರಿನಿಶಾನೆ ತೋರಿಸಿ ಬಹಿಷ್ಕರಿಸಿಬಿಟ್ಟರು. ಆದರೂ ಸಮಿತಿಯು ಅಂದಿನ ಪರಿಸ್ಥಿತಿಯನ್ನು ನೋಡಿ ಬ್ರಿಟಿಷ್ ಪಾರ್ಲಿಮೆಂಟಿಗೆ ವರದಿಯೊಪ್ಪಿಸಿದೆ.

4) ದುಂಡುಮೇಜಿನ ಪರಿಷತ್ತುಗಳು ಮೂರುಸಾರಿ ಇಂಗ್ಲಾಂಡಿನಲ್ಲಿ ನಡೆದಿದೆ, ಮೊದಲ ಪರಿಷತ್ತಿಗೆ (1930) ನಾನಾಪಕ್ಷಗಳ ಹಾಗೂ ಸಂಸ್ಥಾನಗಳ ಪ್ರತಿನಿಧಿಗಳು ಹೋಗಿದ್ದರು. ಏನೂ ಫಲವಾಗಲಿಲ್ಲ. ಎರಡನೆ ಪರಿಷತ್ತಿಗೆ (1931) ಗಾಂಧೀಜಿಯವರು ಕಾಂಗ್ರೇಸಿನ ಏಕೈಕ ಪ್ರತಿನಿಧಿಯಾಗಿ ಹೋಗಿ ಭಾಗವಹಿಸಿದ್ದರು. ಜಾತಿವಾರು ಪ್ರಾತಿನಿಧ್ಯದ ವಿಷಯದಲ್ಲಿ ಒಮ್ಮತ ವಾಗದ ಕಾರಣ ಆ ಸಭೆ ವಿಫಲವಾಯಿತು. ಮೂರನೆ ಸಭೆ ನಡೆದಾಗ (1932) ಕಾಂಗ್ರೇಸ್ ಭಾಗವಹಿಸಲಿಲ್ಲ. ಆದರೂ ಪರಿಷತ್ತು ಭಾರತದ ಆಡಳಿತಿಗೆ ಸ್ವಲ್ಪ ಎಡೆಕೊಟ್ಟಿದೆ. ಅದರ ಫಲವಾಗಿ 1935ರಲ್ಲಿ ಪ್ರಾಂತೀಯ ಸ್ವಾಯತ್ತತೆಯ ಇಂಡಿಯಾ ಕೌನ್ಸಿಲ್ ಆಕ್ಟ್ ಜ್ಯಾರಿಯಾಯಿತು.

## 10 ಸ್ವಾತಂತ್ರ್ಯ ಪ್ರಾಪ್ತಿ

ಅ) ದುಂಡುಮೇಜಿನ ಪರಿಷತ್ತುಗಳ ಫಲವಾಗಿ ಪ್ರಾಂತಗಳಲ್ಲಿ ಸ್ವಯಂ ಆಡಳಿತದ ಕಾಯಿದೆಯು ಜಾರಿಯಾಯಿತು. ಅದರಂತೆ ಏಳು ಪ್ರಾಂತಗಳಲ್ಲಿ ಕಾಂಗ್ರೇಸ್ ಮಂತ್ರಿಮಂಡಲಗಳು (1937) ರಚಿಸಲ್ಪಟ್ಟವು. ನಡೆಸಿದ ಕಾರ್ಯಗಳು - ಜಮೀನ್ದಾರಿ ಪದ್ಧತಿಯ ರದ್ಧತಿ, ಪಾನನಿರೋಧ ಮೊದಲಾದ ಜನೋಪಯೋಗೀಕಾರ್ಯಗಳು. ಆಮೇಲೆ 1939ರಲ್ಲಿ ದ್ವಿತೀಯ ಮಹಾ ಯುದ್ಧಾರಂಭವಾಗಲು ಈ ಮಂಡಲಗಳು ರಾಜಿನಾಮೆ ಕೊಡಬೇಕಾಯಿತು. ಪುನಃ ಯುದ್ಧನಿಷೇಧ ಚಳವಳಿ ನಡೆಯಿತು.

ರಾಷ್ಟ್ರೀಯ ಕಾಂಗ್ರೇಸಿನಲ್ಲಿ ಮತ್ತೂ ಎರಡಭಿಪ್ರಾಯಗಳುಂಟಾಗಿ ಸುಭಾಷ್ಚಂದ್ರಭೋಸರು ಸಂಸ್ಥೆಯಿಂದ ಹೊರಬಿದ್ದು ವಿದೇಶಕ್ಕೆ ಸಾಗಿದರು. ಆಗ ಯುರೋಪಿನಲ್ಲಿ ಯುದ್ಧ ನಡೆಯುತ್ತಲೇ ಇತ್ತು. 1942 ರಲ್ಲಿ ರಂಗೂನು ಪತನವಾದಾಗ ಭಾರತೀಯರ ಮನವೊಲಿಸಲು ಸ್ಟಾಪರ್ಡ್‌ಕ್ರಿಪ್ಸರ ಸಂಧಾನವು ನಡೆಯಿತು. ಸಫಲವಾಗಲಿಲ್ಲ. ಪುನಃ ಗಾಂಧೀಜಿಯವರು ನಾಯಕರಾಗಿ ಬೊಂಬಾಯಿ ಅಧಿವೇಶನದಲ್ಲಿ ಮಾಡು ಇಲ್ಲವೆ ಮಡಿ ಯೆಂಬ ಕಹಳೆಯೂದಿದರು ದೇಶದಾದ್ಯಂತ ಚಲೇಜಾವ್ ಚಳವಳಿಯು ತೀಕ್ಷ್ಣವಾಗಿ ನಡೆಯಿತು. ಎಲ್ಲ ಹಿರಿಯ ನಾಯಕರು ಬಂಧಿಸಲ್ಪಟ್ಟರು. **ತಾತ್ಕಾಲಿಕ ಸರಕಾರ:—** 1945 ರಲ್ಲಿ ಯುದ್ಧ ಮುಗಿಯಿತು. ಜಿನ್ನಾರವರ ನಾಯಕತ್ವದಲ್ಲಿ ಮುಸ್ಲಿಂಲೀಗ್

ಪ್ರಬಲವಾಗಿ ಪ್ರತ್ಯೇಕ ರಾಜ್ಯ ಬೇಕೆಂದು ಹಟ ಹಿಡಿಯಿತು. ಇದರಿಂದ 1946ರಲ್ಲಿ ಚುನಾವಣೆ ನಡೆದು ಲೀಗ್ ಮತ್ತು ಕಾಂಗ್ರೆಸ್ ಮಂತ್ರಿಮಂಡಲಗಳು ಅಧಿಕಾರಕ್ಕೆ ಬಂದುವು. ಆದರೂ ಮತೀಯ ಘರ್ಷಣೆ ನಿಲ್ಲಲಿಲ್ಲ.

ಸ್ವಾತಂತ್ರ್ಯಪ್ರಾಪ್ತಿ:— 1947ಕ್ಕೆ ಬ್ರಿಟನಿನಲ್ಲಿ ಲೇಬರ್ ಪಕ್ಷವು ಅಧಿಕಾರಕ್ಕೆ ಬಂದಾಗ ಅಟ್ಲೀಯವರು ಪ್ರಧಾನಿಗಳಾದರು. ಲಾರ್ಡ್‌ಮೌಂಟ್ ಬ್ಯಾಟನರು ಭಾರತದ ವೈಸರಾಯಿಯಾಗಿ ಬಂದು ಭಾರತವನ್ನು ದ್ವಿಭಾಗಿಸುವ ಸೂತ್ರ ಸಾರಿದರು. ಅದರಂತೆ ಸ್ವಾತಂತ್ರ್ಯ ಕಾಯಿದೆಯು ಅಂಗೀಕೃತವಾಗಿ ಭಾರತ ಮತ್ತು ಪಾಕಿಸ್ಥಾನಗಳೆಂಬ ಎರಡು ರಾಷ್ಟ್ರಗಳು ಅಸ್ತಿತ್ವಕ್ಕೆ ಬಂದವು.
**ಘರ್ಷಣೆಗಳು:—** ಸ್ವಾತಂತ್ರ್ಯ ದೊರೆತಮೇಲೂ ಬಂಗಾಳ-ಪಂಜಾಬು ಮತ್ತು ಉಳಿದೆಡೆಗಳಲ್ಲಿ ಮತೀಯ ಘರ್ಷಣೆಗಳು ನಡೆದುವು. ಗಾಂಧಿಯವರು ಅಲ್ಲಲ್ಲಿ ಸಂಚರಿಸಿ ಶಾಂತಗೊಳಿಸಲು ಪ್ರಯತ್ನಿಸಿದರು. ಆದರೇನು? ಬಹು ಕಾಲ ಜೀವಿಸಲಿಲ್ಲ. ಪ್ರಾರ್ಥನಾ ಸಭೆಗೆ ಹೋಗುತಿದ್ದಾಗ 30-1-1948 ರಂದು ನಾಥುರಾಮಗೋಡ್ಸೆಯ ಗುಂಡಿಗಾಹುತಿಯಾದರು. ಈಗ ಅವರ ಸಮಾಧಿಯು ಡಿಲ್ಲಿಯ ಸಮೀಪ ರಾಜಘಾಟಿನಲ್ಲಿದೆ.

ಇ) I 1) ಭಾರತದ ಏಳು ಪ್ರಾಂತ್ಯಗಳಲ್ಲಿ ಕಾಂಗ್ರೆಸ್ ಮಂತ್ರಿಮಂಡಲಗಳು ಅಧಿಕಾರದಲ್ಲಿದ್ದಾಗ ಪ್ರಪಂಚದ ಎರಡನೆ ಮಹಾಯುದ್ಧವು ಆರಂಭವಾಯಿತು. ಆಗ ಬ್ರಿಟಿಷ್ ಸರಕಾರವು ಭಾರತೀಯರನ್ನು ಕೇಳದೆ ಭಾರತವನ್ನು ಆ ಯುದ್ಧಕ್ಕೆಳೆಯಿತು. ಇದನ್ನು ಭಾರತೀಯರು ವಿರೋಧಿಸಿದರು ಆದ್ದರಿಂದ ಕಾಂಗ್ರೆಸ್ ಸರಕಾರಗಳು ರಾಜಿನಾಮೆ ನೀಡಿದುವು.

2) ಕಾಂಗ್ರೆಸಿನಲ್ಲಿ ಅಹಿಂಸಾತ್ಮಕವಾದ ಹೋರಾಟ ನಡೆಯಬೇಕೆಂಬುದು ಒಂದುವಾದ. ಮುಖಂಡರು ಗಾಂಧೀಜಿ ಮೊದಲಾದವರು ವೈರಿಯು ಖಡ್ಗ ಹಿಡಿದಿದ್ದಾನೆ. ಖಡ್ಗದಿಂದಲೇ ಅವನನ್ನಿದಿರಿಸಬೇಕು. ಈ ಸಮಯ ಬಿಟ್ಟರೆ ನಮಗೆ ಇಷ್ಟು ಒಳ್ಳೆಯ ಸಮಯ ಸಿಗಲಾರದು ಎಂಬುದು ಇನ್ನೊಂದುವಾದ. ಮುಖಂಡರು ಸುಭಾಸ್‌ಚಂದ್ರಭೋಸರು. ಕೊನೆಗೆ ಗಾಂಧೀಜಿಯವರ ಅಭಿಪ್ರಾಯದಂತೆ ಹೋರಾಟ ನಡೆಯಿತು.

3) ಅಖಂಡವಾದ ಇಂಡಿಯವು ಭಾರತ - ಪಾಕಿಸ್ಥಾನಗಳೆಂಬ ಎರಡು ರಾಷ್ಟ್ರಗಳಾದುದು ಮತೀಯ ಘರ್ಷಣೆಗೆ ಕಾರಣ - ಏಕೆಂದರೆ ಪಾಕಿಸ್ಥಾನಕ್ಕೆ ಸೇರಿದ ಬಂಗಾಲದ ಮೊದಲಾದ ಭಾಗಗಳಲ್ಲಿ ಮುಸಲ್ಮಾನರು ಅಧಿಕ ಸಂಖ್ಯೆಯಲ್ಲಿದ್ದರು. ಉಳಿದ ಭಾಗಗಳಲ್ಲಿ ಹಿಂದುಗಳೇ ಬಹುಸಂಖ್ಯೆಯಲ್ಲಿದ್ದರು. ಹೀಗಾಗಿ ಮತಾಂಧತೆ, ಹಾಗೂ ಸಂಖ್ಯಾಬಲದಿಂದ ಅಲ್ಲಲ್ಲಿ ಗಲಭೆಗಳಾದುವು.

4) ಭಾರತಕ್ಕೆ ಸ್ವಾತಂತ್ರ್ಯವೊಪ್ಪಿಸಲು ಬ್ರಿಟನ್‌ನಲ್ಲಿ ಕನ್ಸರ್ವೇಟಿರ್ವಪಕ್ಷಕ್ಕೆ ಇಷ್ಟವಿರಲಿಲ್ಲ. ಲೇಬರ್‌ಪಕ್ಷಕ್ಕೆ ಇಷ್ಟವಿತ್ತು. ಆದರೆ ಆಗ ನಡೆದ ಚುನಾವಣೆಯಲ್ಲಿ ಲೇಬರ್‌ಪಕ್ಷವೇ ಗೆದ್ದು ಅಧಿಕಾರಕ್ಕೆ ಬಂದುದು ಭಾರತಕ್ಕೆ ಅನುಕೂಲವೇ ಆಯಿತು. ಭಾರತಕ್ಕೆ ಮಿತ್ರರಾಗಿದ್ದ ಕ್ಲಿಮೆಂಟ್ ಆಟ್ಲೆಯವರು ಪ್ರಧಾನಿಗಳಾದಮೇಲೆ ಭಾರತಕ್ಕೆ ಸ್ವಾತಂತ್ರ್ಯ ಕೊಡಲು ಎಲ್ಲಾ ವ್ಯವಸ್ಥೆ ಮಾಡಿದರು. ಹಾಗೆ ಭಾರತವು ಸ್ವತಂತ್ರನಾಯಿತು.

II 1) 1935 - ದುಂಡುಮೇಜಿನ ಪರಿಷತ್ತುಗಳ ಕಾರಣವಾಗಿ ಒಂದು ಕಾನೂನು ಜಾರಿಗೆ ಬಂದಿತು.

2) 1937 - ಪ್ರಾಂತಗಳಲ್ಲಿ ಸ್ವಯಂಆಡಳಿತ ಜಾರಿಗೆ ಬಂದಿತು.

3) 1942 - ಬ್ರಿಟಿಷರೇ ಭಾರತವನ್ನು ಬಿಟ್ಟು ತೊಲಗಿರಿ ಎಂಬ ಘೋಷಣೆ

4) 1947 - ಭಾರತಕ್ಕೆ ಸ್ವಾತಂತ್ರ್ಯಪ್ರಾಪ್ತಿ

5) 1948 - ಮಹಾತ್ಮಾಗಾಂಧೀಜಿಯವರ ಮರಣ

III 1) ಸುಭಾಸ್‌ಚಂದ್ರಭೋಸರು (1941) ವಿಶ್ವಸಂಗ್ರಾಮ ಕಾಲದಲ್ಲಿ ಬಂದಿಯಾಗಿ ಪೋಲಿಸರ ರಕ್ಷಣೆಯಲ್ಲಿರುವಾಗ ದೇಹಾರೋಗ್ಯವಿಲ್ಲದೆ ಗಡ್ಡಮೀಸೆಗಳನ್ನು ಬೋಳಿಸಿಕೊಂಡಿದ್ದರು. ಒಂದು ದಿನ ಯಾರಿಗೂ ತಿಳಿಯದಂತೆ ಹೊರಬಿದ್ದು ಛದ್ಮವೇಷ (ಮುಸಲ್ಮಾನರ ವೇಷ) ತೊಟ್ಟು ಪೇಶಾವರ ದಾರಿಯಾಗಿ ಭಾರತದ ಗಡಿ ದಾಟಿದರು. ಹಾಗೆ ಅಫಘಾನಸ್ಥಾನಕ್ಕೆ ಹೋಗಿ ಬ್ರಿಟಿಷರ ವಿರುದ್ಧ ಕಾದಾಡುತಿದ್ದ ಜರ್ಮನಿಯನ್ನು ಸೇರಿದರು. ಅಲ್ಲಿ ಹಿಟ್ಲರನ

ಸ್ನೇಹ ಬೆಳಸಿ ಭಾರತವನ್ನು ಸ್ವತಂತ್ರಗೊಳಿಸುವ ಬಗೆಗೆ ಸಹಾಯ ಕೇಳಿದರು. ಹಿಟ್ಲರನು ಸಹಾಯ ನೀಡುವಂತೆ ಆಶ್ವಾಸನ ವಿತ್ತನು, ಆ ಮೇಲೆ ಜಪಾನಿಗೆ ಹೋದರು. ಆಗ ಜಪಾನರು ಮಲಯ, ಸಿಂಗಾಪುರ, ಅಂಡಮಾನ್ ದ್ವೀಪ ಗಳನ್ನಾಕ್ರಮಿಸುತಿದ್ದರು. ಸುಭಾಸರು ಜಪಾನರ ಸಂಪರ್ಕ ಬೆಳಸಿ ಅವರ ಸೆರೆಯಲ್ಲಿದ್ದ ಭಾರತೀಯರನ್ನು ಬಿಡುಗಡೆಗೊಳಿಸಿ ಆಗ್ನೇಯ ಏಷ್ಯಾದಲ್ಲಿ ಅಜಾದ್ ಹಿಂದ್ ಫೌಜ್ ಕಟ್ಟಿದರು. ಅದಕ್ಕೆ ಮಲಯಾ, ಸಿಂಗಾಪುರ ಬರ್ಮಾ ದೇಶಗಳಲ್ಲಿದ್ದ ಭಾರತೀಯರ ಸಹಾಯ ಸಿಕ್ಕಿತು. ಇದರಿಂದ ಉತ್ಸಾಹಿತರಾದ ಸುಭಾಸರು ಭಾರತೀಯ ಸೈನಿಕರಿಂದ ಪ್ರತಿಜ್ಞೆ ಮಾಡಿಸಿ ಅಜಾದ್ ಹಿಂದ್ ಸರಕಾರವನ್ನು ಸ್ಥಾಪಿಸಿದರು. ಆ ಮೇಲೆ ಅವರ ಮುಖಂಡತ್ವದಲ್ಲಿದ್ದ ಆ ಸೈನ್ಯವು ಹಿಂದುಸ್ಥಾನಕ್ಕೆ ದಾಳಿ ಮಾಡಿ ಬ್ರಿಟಿಷರ ನ್ನೋಡಿಸಲು ಮಣಿಪುರದವರೆಗೂ ಬಂದಿತ್ತು. ಆದರೆ ಅಂದಿನ ಪರಿಸ್ಥಿತಿಯು ಪ್ರತಿಕೂಲವಾದ ಕಾರಣ ಅವರೂ ಅವರ ಸೈನ್ಯವೂ ಹಿಂದಿರುಗಬೇಕಾಯಿತು. ಆದರೇನು? ಆ ಸೈನ್ಯದ ತ್ಯಾಗ - ಸಾಹಸಗಳು ನಮ್ಮ ಸ್ವಾತಂತ್ರ್ಯಪ್ರಾಪ್ತಿಗೆ ಸಹಾಯಕವಾಗಿವೆ.

### ಉ) ಬಿಟ್ಟ ಶಬ್ದಗಳು ಆವರಣದೊಳಗಿವೆ.

1) ಗಾಂಧೀಜಿಯವರು ಶಾಂತಿದೂತರಾಗಿ ಪೂರ್ವಬಂಗಾಳದ – – ಗಳಲ್ಲಿ ಸಂಚರಿಸಿದರು. (ನೌಖಾಲಿ, ತಿಪ್ಪೇರಾ) 2) ಲಾರ್ಡ್‌ವೇವಲ್ ಅವರು — ಮತ್ತು — ಗಳ ನಡುವೆ ಸಂಧಾನಕ್ಕೆ ಯತ್ನಿಸಿದರು (ಲೀಗ್, ಕಾಂಗ್ರೇಸ್) 3) ಕ್ರಿ. ಶ. – ಯಲ್ಲಿ ಸ್ವಾತಂತ್ರ್ಯ ಕಾಯಿದೆಯು — ನಿಂದ ಅಂಗೀಕರಿಸಲ್ಪಟ್ಟಿತು (1947 ಜುಲೈ, ಬ್ರಿಟಿಷ್ ಪಾರ್ಲಿಮೆಂಟ್)

## II ಸ್ವತಂತ್ರಭಾರತದ ಮೊದಲ ಇಪ್ಪತ್ತು ವರ್ಷಗಳು

ಅ) ಭಾರತವು ಸ್ವತಂತ್ರವಾದ ಮೇಲೂ ಬ್ರಿಟಿಷ್ ಕಾಮನ್‌ವೆಲ್ತ್ ರಾಷ್ಟ್ರಗಳಲ್ಲಿ ಒಂದಾಗಿ ಉಳಿಯಿತು. ಆಗ ಕೆಲವು ಸಮಸ್ಯೆಗಳು ಭಾರತ ಸರ ಕಾರದ ಮುಂದೆ ಬಂದುವು. ಅವುಗಳಲ್ಲಿ ನಿರಾಶ್ರಿತರ ಸಮಸ್ಯೆಯೇ ಮೊದಲಾಯಿತು. ಕಾರಣ - ಮತೀಯ ದ್ವೇಷದಿಂದಾಗಿ ಪಾಕಿಸ್ಥಾನದಲ್ಲಿ ಸಹಸ್ರಾರು ಹಿಂದುಗಳು ಕೊಲ್ಲಲ್ಪಟ್ಟರು. ಲಕ್ಷಾಂತರ ಹಿಂದುಗಳು ಭಾರತಕ್ಕೆ

ಬಂದರು. ಅವರಿಗೆ ಅನ್ನ, ಬಟ್ಟೆ, ವಸತಿ, ಶಿಕ್ಷಣಾದಿಗಳನ್ನೊದಗಿಸುವ ಭಾರವು ಭಾರತದ ಮೇಲೆ ಬಿತ್ತು. ಇದನ್ನು ನೆಹರೂ ಸರಕಾರವು ಸಮರ್ಪಕ ವಾಗಿ ನಿರ್ವಹಿಸಿದೆ.

ಎರಡನೆ ದೇಶೀಯ ಸಂಸ್ಥಾನಗಳ ಪ್ರಶ್ನೆ. ವಲ್ಲಭಬಾಯಿ ಪಟೇಲರ ನೀತಿಸೂತ್ರದಿಂದಾಗಿ ಆ ಸಂಸ್ಥಾನಗಳನ್ನೆಲ್ಲ ಭಾರತದ ಒಕ್ಕೂಟದಲ್ಲಿ ಲೀನ ಗೊಳಿಸಲ್ಪಟ್ಟಿತು. ಅವುಗಳಲ್ಲಿ ಹೈದರಾಬಾದನ್ನು ಮಾತ್ರ ಲೀನಗೊಳಿಸಲು ಪೊಲೀಸ್ ಕಾರ್ಯಾಚರಣೆಯನ್ನೇ ಕೈಕೊಳ್ಳಬೇಕಾಯಿತು.

**ಭಾಷಾವಾರು ಪ್ರಾಂತರಚನೆ:-** ಭಾರತವು (26-1-1950) ಗಣರಾಜ್ಯವೆಂದು ಘೋಷಿಸಲ್ಪಟ್ಟಾಗ ಎ. ಬಿ. ಸಿ. ಡಿ. ಎಂಬ ನಾಲ್ಕು ವಿಭಾಗಗಳಲ್ಲಿ 27 ರಾಜ್ಯಗಳಿದ್ದುವು. ಅವುಗಳು ಭಾಷೆಯ ಆಧಾರದ ಮೇಲೆ 1-11-56ರ ವೇಳೆಗೆ ಭಾಷಾವಾರು ರಾಜ್ಯಗಳಾಗಿ ವಿಂಗಡಿಸಲ್ಪಟ್ಟವು. ಆಗ 14 ರಾಜ್ಯಗಳಿದ್ದರೆ ಈಗ 17ಕ್ಕೇರಿವೆ. ಕೆಲವು ಕೇಂದ್ರಸರಕಾರದ ವಶದಲ್ಲಿರುವುವು.

ಇಲ್ಲಿ ವಯಸ್ಕಮತದಾನ ಪದ್ಧತಿಯಂತೆ ನಾಲ್ಕು ಮಹಾಚುನಾವಣೆ ಗಳಾಗಿವೆ. ರಾಷ್ಟ್ರಾಭಿವೃದ್ಧಿಯ ಕಾರ್ಯಗಳಿಗಾಗಿ ಮೂರು ಪಂಚವಾರ್ಷಿಕ ಯೋಜನೆಗಳೂ ನಡೆದಿವೆ.

ಚೀನಾ ಪಾಕಿಸ್ತಾನಗಳ ಆಕ್ರಮಣ - 1) ಭಾರತವು ಎಲ್ಲಾ ರಾಷ್ಟ್ರ ಗಳೊಡನೆ ಸ್ನೇಹಸಂಬಂಧದಿಂದ ವರ್ತಿಸಿದ್ದರೂ ಚೀನವು 1962ರಲ್ಲಿ ಆಕ್ರಮಣ ನಡೆಸಿತು. ಆಗ ನಮ್ಮ ಯೋಧರು ಧೈರ್ಯದಿಂದಿದಿರಾಗಿ ಹಿಮ್ಮೆಟ್ಟುವಂತೆ ಮಾಡಿದರು. 2) 1964 ರಲ್ಲಿ ಪಂಡಿತಜವಾಹರಲಾಲರು ನಿಧನರಾದಮೇಲೆ ಲಾಲಬಹದ್ದೂರಶಾಸ್ತ್ರಿಗಳು ಪ್ರಧಾನಿಗಳಾದರು.

3) 1965ನೇ ಸಪ್ಟಂಬರದಲ್ಲಿ ಪಾಕಿಸ್ಥಾನವು ಭಾರತದಮೇಲೆ ದಾಳಿ ಮಾಡಿದಾಗ ಇಡೀ ಭಾರತವೇ ಅದರ ವಿರುದ್ಧ ಹೋರಾಟ ನಡೆಸಿತು. 4) ಆಗ ರಷ್ಯಾ ಪ್ರಧಾನಿ ಅಲೆಕ್ಸಿಯಿಕೋಸೀಗಿನ್ ಅವರು ಮಧ್ಯಸ್ತಿಕೆ ವಹಿಸಿ ಪಾಕಿಸ್ಥಾನದ ಪ್ರಧಾನಿ ಅಯೂಬ್‌ಖಾನ್ ಮತ್ತು ಭಾರತದ ಪ್ರಧಾನಿ

ಲಾಲಬಹದ್ದೂರಶಾಸ್ತ್ರಿ ಇವರ ನಡುವೆ ಶಾಂತಿಸಂಧಾನಕ್ಕೆ ಪ್ರಯತ್ನಿಸಿದರು. ಆದರೆ ತಾಷ್ಕೆಂಟ್ ಒಪ್ಪಂದವಾದೊಡನೆ ಶಾಸ್ತ್ರಿಯವರು ನಿಧನರಾಗಿ ಭಾರತೀಯರನ್ನು ಪರುಗಿಸಿಬಿಟ್ಟರು.

ಇ) I 1) ನಿರಾಶ್ರಿತರ ಸಮಸ್ಯೆ (ಪಾಕಿಸ್ಥಾನದಿಂದ ಬಂದ ಲಕ್ಷಾಂತರ ಜನರ ವಸತಿಉದ್ಯೋಗಗಳ ವಿಚಾರ; ಸಂಸ್ಥಾನಗಳ ವಿಲಿನೀಕರಣ, ಭಾಷಾ ವಾರುರಾಜ್ಯಗಳ ಪುನರ್ವಿಂಗಡಣೆ, ಚೀನಾ ಮತ್ತು ಪಾಕಿಸ್ಥಾನಗಳ ಆಕ್ರಮಣ ವಿರುದ್ಧ ಹೋರಾಟ, ರಾಷ್ಟ್ರಾಭಿವೃದ್ಧಿ ಯೋಜನೆಗಳು— ಭಾರತವು ಎದುರಿಸ ಬೇಕಾದ ಸಮಸ್ಯೆಗಳು

2) ಭಾರತವು ಸ್ವತಂತ್ರವಾದಾಗ ಸಣ್ಣ-ದೊಡ್ಡ ಸಂಸ್ಥಾನಗಳು ಸೇರಿ ಸುಮಾರು 600ರಷ್ಟಿದ್ದವು. ಅವುಗಳ ರಾಜಕೀಯ ಭವಿಷ್ಯವು ನಿರ್ಧ ಸಲ್ಪಟ್ಟಿಲ್ಲ. ಕೆಲವು ಮಹಾರಾಜರು ಸ್ವತಂತ್ರರಾಗಲು ಹವಣಿಸಿದರು. ಇದು ರಾಷ್ಟ್ರದ ಐಕ್ಯತೆ-ಹಾಗೂ ಭದ್ರತೆಗೆ ಧಕ್ಕೆಯೆಂದೆಣಿಸಿ ವಲ್ಲಭಬಾಯಿ ಪಟೇಲರು ಕೆಲವು ರಾಜರ ಮನವೊಲಿಸಿದರು, ಕೆಲವರನ್ನು ಬೆದರಿಸಿದರು. ಹಾಗೆ ಅವರ ಸಂಸ್ಥಾನಗಳಲ್ಲಿ ಚಿಕ್ಕ ಸಂಸ್ಥಾನಗಳನ್ನು ನೆರೆಯರಾಜ್ಯಗಳಲ್ಲಿ ಸೇರಿಸಿ ದೊಡ್ಡ ಸಂಸ್ಥಾನಗಳನ್ನು ಅಂಗರಾಜ್ಯಗಳನ್ನಾಗಿ ಮಾಡಿ ಆ ರಾಜರನ್ನು ರಾಜಪ್ರಮುಖರನ್ನಾಗಿ ಮಾಡಿದರು. ಆದರೆ ಒಕ್ಕೂಟಕ್ಕೆ ಸೇರಲು ಇಷ್ಟ ನಿಲ್ಲದ ಹೈದರಾಬಾದನ್ನು (1948) ಪೋಲಿಸ್ ಕಾರ್ಯಾಚರಣೆಯ ಮೂಲಕ ಅಧೀನಗೊಳಿಸಿದರು.

3) ಭಾಷೆಯ ಆಧಾರದಮೇಲೆ ಭಾಷಾವಾರು ರಾಜ್ಯಗಳಾದರೂ ಅವುಗಳಲ್ಲಿ ನಾನಾ ವಿಧದ ವಿವಾದಗಳುಂಟಾದವು. ಅವುಗಳ ಇತ್ಯರ್ಥಕ್ಕೆ ವಲಯಮಂಡಲಗಳು ರಚಿಸಲ್ಪಟ್ಟಿವೆ. ಆದರೂ ಅಂತಹ ವಿವಾದಗಳನ್ನು ಶಾಂತರೀತಿಯಿಂದ ಬಗೆಹರಿಸಿ ಭಾರತೀಯರಾದ ನಾವೆಲ್ಲರೂ ಒಂದೇ ಎಂಬ ಭಾವನೆಯಲ್ಲಿರುವುದೇ ಭಾವೈಕ್ಯತೆ. ಹೀಗಿದ್ದರೆ ರಾಷ್ಟ್ರದ ಪ್ರಗತಿ ಹಾಗೂ ಒಕ್ಕಟ್ಟು ಸಾಧಿಸಿದಂತಾಗುವುದು.

4) ಭಾರತಸರಕಾರವು ಸ್ವತಂತ್ರವಾದಮೇಲೆ ಫ್ರೆಂಚ್ ಸರಕಾರ ದೊಡನೆ ಸಂಧಾನ ನಡೆಸಿತು. ಹೀಗಾಗಿ ಫ್ರೆಂಚರು ತಮ್ಮ ವಸಾಹತುಗಳನ್ನು

ಭಾರತದ ಒಕ್ಕೂಟಕ್ಕೆ ವಿಲೀನಗೊಳಿಸಿದರು. ಪೋರ್ಚುಗೀಜರು ಮಾತ್ರ ಒಪ್ಪಲಿಲ್ಲ. ಕಡೆಗೆ 1961ನೇ ಡಿಸೆಂಬರದಲ್ಲಿ ಬಲಪ್ರಯೋಗದಿಂದ ಗೋವಾ ಮೊದಲಾದ ವಸಾಹತುಗಳನ್ನು ಅವರಾಡಳಿತದಿಂದ ಮುಕ್ತಗೊಳಿಸಲಾಯ್ತು. ಈಗ ಅವೆಲ್ಲ ಭಾರತದ ಒಕ್ಕೂಟಕ್ಕೆ ಸೇರಲ್ಪಟ್ಟಿವೆ.

5) ಭಾಷಾವಾರು ಪ್ರಾಂತರಚನೆಯಾಗಬೇಕೆಂಬ ಪ್ರಯತ್ನ ಮೊದಲೇ ಇತ್ತು. ಸ್ವಾತಂತ್ರ್ಯಪ್ರಾಪ್ತಿಯಾದಮೇಲೆ ಕೆಲವು ಮುಖಂಡರ ಒತ್ತಾಯದಿಂದ ರಾಜ್ಯಪುನರ್ಘಟನಾ ಆಯೋಗವು ರಚಿಸಲ್ಪಟ್ಟಿತು. ಮೊದಲು ಆಂಧ್ರ ರಾಜ್ಯರಚನೆಯಾದಮೇಲೆ ಮದ್ರಾಸ್, ಬೊಂಬಾಯಿ, ಮೈಸೂರು, ಹೈದರಾಬಾದು ರಾಜ್ಯಗಳಲ್ಲಿ ಹಂಚಿಹೋಗಿದ್ದ ಕನ್ನಡಪ್ರದೇಶಗಳು ಸೇರಿ 1-11-1956ರಲ್ಲಿ ಈಗಿನ ಮೈಸೂರುರಾಜ್ಯವು ರಚಿತವಾಯಿತು. (ಸೂಚನೆ. ಈ ರಾಜ್ಯದ ಜಿಲ್ಲೆಗಳು ಯಾವುವು?)

II 1) ಅ) ಭಾರತೀಯರು ಸತ್ಯ, ಅಹಿಂಸೆ, ಪ್ರೇಮಮಾರ್ಗಗಳಿಂದ ಹೋರಾಡಿದರು. 2) ಇ) ಆಂಧ್ರರಾಜ್ಯ 3) ಆ) ನಾಲ್ಕು ಸಾರೆ 4) ಇ) ಲಾಲ್ ಬಹದ್ದೂರಶಾಸ್ತ್ರಿ 5) ಅ) ಕಾಶ್ಮೀರರಾಜ್ಯವು ತನಗೆ ದಕ್ಕಲಿಲ್ಲವೆಂಬ ಕೋಪ

III ರಾಜ್ಯಗಳೂ - ಭಾಷೆಗಳೂ

1) ಮೈಸೂರು - ಕನ್ನಡ 2) ಕೇರಳ - ಮಲೆಯಾಳ 3) ಮದ್ರಾಸ್ - ತಮಿಳ್ನಾಡ್ - ತಮಿಳು 4) ಆಂಧ್ರ - ತೆಲುಗು 5) ಒಡಿಸ್ಸಾ - ಉರಿಯಾ 6) ಪಶ್ಚಿಮಬಂಗಾಳ - ಬಂಗಾಲಿ 7) ಆಸ್ಸಾಂ-ಅಸ್ಸಾಮಿ 8) ನಾಗಾಲೇಂಡ್ - ಅಸ್ಸಾಮಿ 9) ಬಿಹಾರ್ - ಬಿಹಾರಿ, ಹಿಂದಿ 10) ಉತ್ತರಪ್ರದೇಶ - ಹಿಂದಿ 11) ಜಮ್ಮುಕಾಶ್ಮೀರ - ಕಾಶ್ಮೀರಿ, ಉರ್ದು 12) ಪಂಜಾಬು - ಪಂಜಾಬಿ 13) ಹರ್ಯಾನಾ - ಪಂಜಾಬಿ 14) ರಾಜಸ್ಥಾನ - ರಾಜಸ್ಥಾನಿ ಹಿಂದಿ 15) ಗುಜರಾಥ್ - ಗುಜರಾಥಿ 16) ಮಧ್ಯಪ್ರದೇಶ - ಹಿಂದಿ 17) ಮಹಾರಾಷ್ಟ್ರ - ಮರಾಠಿ 18) ಮೇಘಾಲಯ

ಉ) 1) ಹೊಂದಿಸಿ - ಬರೆಯುವುದು.

1) ದಲಾಯಿಲಾಮ ಸಂಯುಕ್ತಅಮೇರಿಕಾಧ್ಯಕ್ಷ

2) ರಿಚರ್ಡ್ ನಿಕ್ಸನ್ ಇಂದಿನ ಪಾಕಿಸ್ಥಾನದ ಪ್ರಧಾನಿ
3) ಯಾಹ್ಯಾ ಖಾನ್ ,, ಬ್ರಿಟನಿನ ಮುಖ್ಯಮಂತ್ರಿ
4) ಐಸಾಕ್ ಸೇಟೋ ,, ರಷ್ಯಾಪ್ರಧಾನಿ
5) ರಜಕಾರ್ ,, ಟಿಬೇಟ್
6) ಅಯಾಬ್ ಖಾನ್ ,, ಹೈದರಾಬಾದ್
7) ಫಜಲಾಲಿ 9 ವಿಲ್ಸನ್ ,, ಜಪಾನಿನ ಮುಖ್ಯಮಂತ್ರಿ
8) ಕೊಸಿಗೀನ್

2) ಈ ಪಟ್ಟಣಗಳು ಯಾವ ರಾಜ್ಯಗಳ ರಾಜಧಾನಿಗಳು?

1) ಪಾಟ್ನಾ 2) ಶಿಲಾಂಗ್ 3) ಕೊಹಿಮಾ 4) ಇಂಫಾಲ 5) ಅಹ್ಮದಾಬಾದ್ 6) ಚಂಡಿಗರ 7) ಶ್ರೀನಗರ 8) ಭುವನೇಶ್ವರ 9) ಜೈಪುರ 10) ಹೈದರಾಬಾದ್ 11) ಅಗರ್ತಾಲ 12) ಲಕ್ನೊ 13) ಭೋಪಾಲ್

3) ತುಂಬಿಸಿ ಬರೆಯುವುದು:— 1) ಸ್ವತಂತ್ರಭಾರತದ ಕೊನೆಯ ಗವರ್ನರ್ ಜನರಲ್ 2) 1-5-1960ರಲ್ಲಿ — ರಾಜ್ಯಸ್ಥಾಪನೆಯಾಯಿತು 3) ಭಾಷಾವಾರು ರಾಜ್ಯಗಳಾದಾಗ - ರ ಹುದ್ದೆ ರದ್ದಾಯಿತು.

**ಬಿಟ್ಟ ಶಬ್ದಗಳು**:— 1) ಶ್ರೀ ರಾಜಗೋಪಾಲಾಚಾರ್ಯರು 2) 2) ಗುಜರಾತ್ 3) ರಾಜಪ್ರಮುಖ

4) ಸಂಕ್ಷೇಪತಿಳಿಸುವುದು. 1) ಲಾಲ್ ಬಹದ್ದೂರ ಶಾಸ್ತ್ರಿಗಳು 2) ಜವಾಹರಲಾಲ್ ನೆಹರು.

1) ಲಾಲ್ ಬಹದ್ದೂರ-ಜನನ 2-10-1904 ಹುಟ್ಟೂರು ಉತ್ತರ ಪ್ರದೇಶದ ಮೊಗಲಸರಾಯಿಗ್ರಾಮ. ತಂದೆ-ಶ್ರೀವಾಸ್ತರು ಶ್ರೀಮತಿ - ಲಲಿತಾ ದೇವಿ. ಇವರು ಕಾಶಿಯ ವಿದ್ಯಾಪೀಠದಲ್ಲಿ ಶಾಸ್ತ್ರಿಪರೀಕ್ಷೆ ಪಾಸಾಗಿ ಲಾಲಬಹದ್ದೂರ ಶಾಸ್ತ್ರಿಗಳಾದರು. ಆ ಮೇಲೆ ಗಾಂಧೀಜಿ ಹಾಕಿಕೊಟ್ಟ ಮಾರ್ಗದಲ್ಲಿ ಮುಂದರಿದು ನೆಹರೂ ಮಂತ್ರಿಮಂಡಲದಲ್ಲಿ ರೈಲ್ವೆಮಂತ್ರಿಗಳಾಗಿ,

ಗೃಹಮಂತ್ರಿಗಳಾಗಿ ಶ್ರಮಿಸಿದರು. ಕೊನೆಗೆ 1964ರಿಂದ 1966ವರೆಗೆ ಭಾರತದ ಪ್ರಧಾನಿಗಳಾಗಿ ರಷ್ಯಾಕ್ಕೆ ಹೋದಾಗ ತಾಷ್ಕಂಟದಲ್ಲಿ ದೈವಾಧೀನ ರಾದರು.

2) ಜವಾಹರಲಾಲ್‌ನೆಹರೂರವರು ಸುಪ್ರಸಿದ್ಧ ಹೈಕೋರ್ಟಿನ ವಕೀಲರಾದ ಮೋತಿಲಾಲರ ಮತ್ತು ಸ್ವರೂಪರಾಣಿಯವರ ಪ್ರಿಯಪುತ್ರರು. ಜನನ 14-11-1889 ಜನ್ಮಸ್ಥಳ ಅಲಹಾಬಾದಿನ ಆನಂದಭವನ. ಇವರು ಲಂಡನಿನಲ್ಲಿ (1912) ಬ್ಯಾರಿಸ್ಟರ್ ಪಾಸಾಗಿ ಸ್ವಲ್ಪ ಸಮಯ ವಕೀಲರಾದರು. ಮತ್ತೆ ರಾಷ್ಟ್ರೀಯ ಕಾಂಗ್ರೇಸಿನಲ್ಲಿ ಸೇರಿ ಮೂರು ನಾಲ್ಕು ಸಾರಿ ಅಧ್ಯಕ್ಷ ರಾದರು. ಭಾರತವು ಸ್ವತಂತ್ರವಾದಮೇಲೆ 1947ರಿಂದ 1964ರ ವರೆಗೆ ಭಾರತದ ಪ್ರಧಾನಿಗಳಾಗಿ, ಅಂತರಾಷ್ಟ್ರೀಯ ವ್ಯಕ್ತಿಯಾಗಿ ಕೀರ್ತಿಶೇಷರಾದರು. ಇವರ ವಿದೇಶ ಧೋರಣೆಗಳೂ ಪಂಚಶೀಲ ತತ್ವಗಳೂ ಜಗತ್ತಿಗೆ ಆದರ್ಶ ಪ್ರಾಯವಾಗಿವೆ.

## 12 ಪಂಚವಾರ್ಷಿಕಯೋಜನೆಗಳು

ಅ) ಭಾರತದಲ್ಲಿ ಅಪಾರಸಂಪತ್ತಿದ್ದರೂ ಬ್ರಿಟಿಷ್‌ಸರಕಾರವು ಜನರ ಹಿತಕ್ಕಾಗಿ ಯಾವ ಉಪಯೋಗಕ್ಕೂ ತರಲಿಲ್ಲ. ಇದರಿಂದ ಭಾರತವು ಹಿಂದುಳಿದ ದೇಶವೆನಿಸಿತು. ಸ್ವಾತಂತ್ರ್ಯ ಬಂದಮೇಲಾದರೂ ಜನತೆಗೆ ಬೇಕಾದ ಸೌಕರ್ಯಗಳನ್ನೊದಗಿಸಿ ಕೊಡುವುದು ಸರಕಾರದ ಕರ್ತವ್ಯವಾದ ಕಾರಣ ಪಂಡಿತಜವಾಹರಲಾಲರ ಅಧ್ಯಕ್ಷತೆಯಲ್ಲಿ ಒಂದು ಯೋಜನಾ ಆ ಯೋಗವು (ಪ್ಲೇನಿಂಗ್‌ಕಮಿಶನ್) 1950ರಲ್ಲಿ ಸಿದ್ಧವಾಯಿತು.

ಬಹಳ ಹೀನಸ್ಥಿತಿಯಲ್ಲಿದ್ದ ರಷ್ಯಾದೇಶವು ಪಂಚವಾರ್ಷಿಕ ಯೋಜನೆಗಳ ಮೂಲಕ ಮೂರು ದಶಕಗಳಲ್ಲಿಯೇ ಸಂಪತ್ಸಮೃದ್ಧ ದೇಶವೆನಿಸಿದೆ. ಇದರಿಂದ ಸ್ಫೂರ್ತಿಗೊಂಡ ಆಯೋಗದವರು ನಿರ್ದಿಷ್ಟ ಕಾಲದಲ್ಲಿ ನಿರ್ದಿಷ್ಟ ರೀತಿಯಲ್ಲಿ ಜನಸಾಮಾನ್ಯರ ಸ್ಥಿತಿಗತಿಗಳನ್ನು ಸುಧಾರಿಸುವುದಕ್ಕಾಗಿ ಐದೈದು ವರ್ಷಗಳ ಯೋಜನೆಗಳನ್ನು ರೂಪಿಸಿಕೊಂಡರು.

ಮೊದಲ ಯೋಜನೆಯು 5-4-1951 ರಿಂದ ಐದು ವರ್ಷಗಳ ವರೆಗೆ. ಅದರ ಮುಖ್ಯಗುರಿ - ಜನತೆಯ ಆಹಾರಾಭಾವವನ್ನು ನೀಗಿಸುವುದು. ರಸ್ತೆ

ಗಳ ರಚನೆ, ಸಾಮಾಜಿಕ ಸುಧಾರಣೆಗಳಿಗೂ ಲಕ್ಷ್ಯಕೊಡಲಾಗಿತ್ತು. ಎರಡನೆಯ ಯೋಜನೆಯು 1956ರಿಂದ 1961 ವರೆಗೆ. ಅದರಲ್ಲಿ ಬೃಹತ್ ಕೈಗಾರಿಕೆಗಳಿಗೆ ಹೆಚ್ಚಿನ ಮಹತ್ವಕೊಡಲಾಗಿದೆ. ಇದರಿಂದ ರಾಷ್ಟ್ರೀಯಾದಾಯವು ವೃದ್ಧಿಯಾಗಿ ಹೆಚ್ಚಿನವರಿಗೆ ಉದ್ಯೋಗಾವಕಾಶಗಳು ದೊರೆಶಿವೆ. ಮೂರನೆ ಯೋಜನೆಯು 1961ರಿಂದ 1966ರ ವರೆಗೆ. ಇದರಲ್ಲಿ ಆಹಾರ ಸ್ವಾವಲಂಬನ, ಯಾಂತ್ರೀಕರಣಗಳ ಹೆಚ್ಚಳ, ಗೃಹೋದ್ಯೋಗಗಳಿಗೆ ಉತ್ತೇಜನ ಕೊಡುವುದು ಈ ಉದ್ದೇಶಗಳನ್ನು ಪೂರೈಸುವ ಹಂಚಿಕೆಯಿತ್ತು. ಆದರೆ ಆಹಾರಸ್ವಾವಲಂಬನವು ಸಾಧ್ಯವಾಗಲಿಲ್ಲ. ಈಗ ನಾಲ್ಕನೆಯ ಯೋಜನೆಯು 1966ರಿಂದ ಜ್ಯಾರಿಯಲ್ಲಿದೆ.

ಇ) I 1) ಭಾರತವು ವಿಶಾಲವಾದ ದೇಶ, ಜನಸಂಖ್ಯೆ ಅಪಾರವಿದೆ. ಕಲ್ಲಿದ್ದಲು ಮೊದಲಾದ ಖನಿಜಸಂಪತ್ತು. ಕೈಗಾರಿಕೆಗೆ ಬೇಕಾದ ಜಲಸಂಪತ್ತು ದಾರಾಳ ಇವೆ. ಹೀಗಿದ್ದರೂ ಬ್ರಿಟಿಷರಾಳ್ವಿಕೆಯಿಂದ ಬಹಳ ಹಿಂದುಳಿದ ರಾಷ್ಟ್ರವೆನಿಸಿತು. ಸ್ವಾತಂತ್ರ್ಯಬಂದಮೇಲಾದರೂ ಆ ಸಂಪತ್ತುಗಳನ್ನು ಪಯೋಗಿಸಿ ಜನತೆಗೆಬೇಕಾದ ಆಹಾರ, ವಸತಿ, ಶಿಕ್ಷಣ, ಉದ್ಯೋಗ, ವೈದ್ಯಕೀಯ ಸಹಾಯವನ್ನೊದಗಿಸಿ ಕೊಡುವುದು ಸರಕಾರದ ಕರ್ತವ್ಯವಿದೆ. ಆದುದರಿಂದ ರಶ್ಯಾದೇಶವು ಕೈಕೊಂಡ ಪಂಚವಾರ್ಷಿಕ ಯೋಜನೆಗಳ ಪ್ರಗತಿಯನ್ನು ನೋಡಿ ಭಾರತದ ಮುಖಂಡರು ಯೋಜನಾ ಆಯೋಗದ ಮೂಲಕ ಪಂಚವಾರ್ಷಿಕಯೋಜನೆಗಳನ್ನು ರೂಪಿಸಿಕೊಂಡರು.

2) ಪ್ರಥಮ ಪಂಚವಾರ್ಷಿಕಯೋಜನೆಯಲ್ಲಿ ವೆಚ್ಚವಾಡಿದ ಹಣ-ಎರಡು ಸಾವಿರ ಕೋಟಿ ರೂಪಾಯಿಗಳು. ಇವುಗಳಿಂದ ಸಿಂದ್ರಿಗೊಬ್ಬರ ಕಾರ್ಖಾನೆಯು ಸ್ಥಾಪಿತವಾಗಿದೆ. ಭಾಕ್ರಾನಂಗಲ್, ದಾಮೋದರ, ಹಿರಾಕುಡ್, ತುಂಗಭದ್ರಾ ಅಣೆಕಟ್ಟುಗಳ ಯೋಜನೆಯು ನೆರವೇರಿದೆ. ರೈಲ್ವೇಇಂಜಿನ್, ಟೆಲಿಫೋನ್ ಇತ್ಯಾದಿ ಕಾರ್ಖಾನೆಗಳು ಆರಂಭಿಸಲ್ಪಟ್ಟಿವೆ. ಆಹಾರೋತ್ಪಾದನೆಯು ಏರಿದೆ. ಜನರ ಸರಾಸರಿ ಆದಾಯ ಶೇಕಡ 11 ರಷ್ಟಾಯಿತು. ಜನರ ಜೀವನಮಟ್ಟವು ಸ್ವಲ್ಪ ಉತ್ತಮಗೊಂಡಿತು.

3) ದ್ವಿತೀಯ ಯೋಜನೆಯಲ್ಲಿ ವೆಚ್ಚವಾದುದು ಸುಮಾರು 4800 ಕೋಟಿ ರುಪಾಯಿಗಳು, ಇದರಿಂದ ಉದ್ಯೋಗವಕಾಶಗಳು ಹೆಚ್ಚಾಗಿ, ರಾಷ್ಟ್ರೀ

ಯ ಆದಾಯ ಶೇಕಡ 25ರಷ್ಟಾಗಿದೆ. ಸಾಧಿಸಿದ ಪ್ರಗತಿಗಳು: – ಭಿಲ್ಲಾ, ರೂರ್ಕೇಲಾ, ದುರ್ಗಾಪುರಗಳಲ್ಲಿ ಬೃಹತ್ ಉಕ್ಕು - ಕಬ್ಬಿಣ ಕಾರ್ಖಾನೆಗಳು, ಚಿತ್ತರಂಜನ ರೈಲ್ವೆಇಂಜಿನ್ ಕಾರ್ಖಾನೆ, ಪೆರಂಬೂರು ಇಂಟಿಗ್ರಲ್ ಕೋಚ್‌ತಯಾರಿಕೆಯ ಕಾರ್ಖಾನೆಗಳು ಸ್ಥಾಪಿಸಲ್ಪಟ್ಟಿವೆ. ಇನ್ನು ಇತರ ಹೊಸ ಹೊಸ ಕಾರ್ಖಾನೆಗಳಾಗಿ, ಹಿಂದಿದ್ದ ಅನೇಕ ಚಿಕ್ಕ ಕಾರ್ಖಾನೆಗಳೂ ಹಿರಿದಾಗಲ್ಪಟ್ಟಿವೆ.

4) ಅಮೇರಿಕಾ, ಬ್ರಿಟನ್, ರಷ್ಯಾ ಮೊದಲಾದ ಪ್ರಮುಖ ರಾಷ್ಟ್ರಗಳು ನಾನಾರೂಪಗಳಲ್ಲಿ ಸಹಾಯ ಮಾಡಿವೆ. ಮತ್ತು ಸರಕಾರವು ಸಾರ್ವಜನಿಕ ಸಾಲಗಳ ಮೂಲಕ, ಉಳಿತಾಯ ಯೋಜನೆಗಳ ಮೂಲಕ ರಫ್ತು ವ್ಯಾಪಾರಗಳ ಹಾಗೂ ಸುಂಕತೆರಿಗೆಗಳ ಹೆಚ್ಚಳದ ಮೂಲಕ ಹಣಸಂಗ್ರಹಿಸುತ್ತಿದೆ.

5) ತನ್ನ ಸಂಪಾದನೆಯಲ್ಲಿ ಸ್ವಲ್ಪ ಸ್ವಲ್ಪ ಉಳಿತಾಯ ಮಾಡಿ ರಾಷ್ಟ್ರಕ್ಕೆ ಸಾಲವಾಗಿ ಕೊಟ್ಟರೆ ಆ ಹಣ ದೇಶಾಭಿವೃದ್ಧಿಯೋಜನೆಗಳಿಗೆ ವಿನಿಯೋಗವಾಗುವುದು. ಮತ್ತೆ ಅವನ ಹಣ ಆಪತ್ಕಾಲಕ್ಕೆ ಸಹಾಯವಾಗುವುದು. ಸಿಗುವಾಗ ಆ ಹಣ ಹನಿಕೂಡಿ ಹಳ್ಳವೆಂಬಂತೆ ಒಂದು ದೊಡ್ಡಮೊತ್ತವಾಗಿ ಪರಿಣಮಿಸುವುದು.

II 1) ಭಿಲ್ಲಾ — ಉ) ಉಕ್ಕು ತಯಾರಿಕೆ
2) ಸಿಂದ್ರಿ — ಈ) ಗೊಬ್ಬರ ತಯಾರಿಕೆ
3) ಚಿತ್ತರಂಜನ — ಅ) ರೈಲ್ವೆಇಂಜಿನ್ ತಯಾರಿಕೆ
4) ಪೆರಂಬೂರು ಆ) ಇಂಟಿಗ್ರಲ್ ಕೋಚುತಯಾರಿಕೆ

ಉ) ಸಂಕ್ಷಿಪ್ತ ತಿಳಿಸುವುದು 1) ಮೊದಲನೆ ಯೋಜನೆಯ ಉದ್ದೇಶಗಳು 2) ಎರಡನೆ ಯೋಜನೆಯ ಉದ್ದೇಶಗಳು 3) ತೃತೀಯ ಯೋಜನೆಯಲ್ಲಿ ಆಹಾರೋತ್ಪತ್ತಿಯ ಬಗೆಗೆ ಸ್ವಾವಲಂಬನ ಅಸಾಧ್ಯವಾಯಿತು.

1) ಆಹಾರೋತ್ಪತ್ತಿ. ಕಚ್ಚಾವಸ್ತುಗಳ ಉತ್ಪನ್ನ ಹೆಚ್ಚಿಸುವುದು. ನೀರಾವರಿ ಹಾಗೂ ಜಲವಿದ್ಯುಚ್ಛಕ್ತಿಯನ್ನೊದಗಿಸುವುದು, ಇವುಗಳೊಡನೆ ಸಾರಿಗೆ ಸುಧಾರಣೆ, ರಸ್ತೆಗಳ ರಚನೆ, ವಸತಿಸೌಕರ್ಯ, ಶಿಕ್ಷಣ ಹಾಗೂ

ವೈದ್ಯಕೀಯ ಸಹಾಯ. ಇತ್ಯಾದಿ ಸಾಮಾಜಿಕ ಸುಧಾರಣೆಗಳನ್ನು ಮಾಡುವುದು.

2) ಕೈಗಾರಿಕೆಗಳನ್ನು ಹೆಚ್ಚಿಸುವುದು (ಬೃಹತ್ ಕೈಗಾರಿಕೆಗಳ ಸ್ಥಾಪನೆ) ರಾಷ್ಟ್ರೀಯಾದಾಯ ಅಭಿವೃದ್ಧಿಗೊಳಿಸುವುದು, ಆರ್ಥಿಕ ಸ್ಥಿತಿಯಲ್ಲಿ ಅಸಮಾನತೆಯನ್ನು ಕಡಿಮೆಮಾಡುವುದು, ಎಲ್ಲಾ ಭಾಗಗಳಲ್ಲೂ ಜನರಿಗೆ ಹೆಚ್ಚಿನ ಉದ್ಯೋಗ ಅವಕಾಶಗಳು ಸಿಗುವಂತೆ ಮಾಡುವುದು.

3) ಈ ಯೋಜನೆಯಲ್ಲಿ ಆಹಾರ ಸ್ವಾವಲಂಬನದ ಬಗೆಗೆ ಹೆಚ್ಚಿನ ಮಹತ್ವಕೊಡಲಾಗಿತ್ತು. ಆದರೆ ಆಕಸ್ಮಿಕವಾಗಿ ಚೀನಾ ಪಾಕಿಸ್ತಾನಗಳು ಧಾಳಿಮಾಡಿದವು. ಇದರಿಂದ ರಾಷ್ಟ್ರ ರಕ್ಷಣಾಕಾರ್ಯಕ್ಕಾಗಿಯೇ ಹೆಚ್ಚಿನ ಹಣ ವೆಚ್ಚವಾಗುವಂತಾಯಿತು. ಹೀಗಾಗಿ ಆಹಾರ ಸ್ವಾವಲಂಬನವು ಸಾಧ್ಯವಾಗಲಿಲ್ಲ.

## 13 ಭಾರತದ ಸಂವಿಧಾನದ ರಚನೆ

ಅ) ಭಾರತದ ರಾಷ್ಟ್ರೀಯ ಮುಖಂಡರು ಸಂವಿಧಾನ ರಚನೆಗಾಗಿ ಬ್ರಿಟಿಷರನ್ನು ಒತ್ತಾಯಿಸುತ್ತಾ ಸ್ವರಾಜ್ಯಸಾಧನೆಗಾಗಿ ಬಹಳ ಕಾಲದಿಂದಲೆ, ಚಳವಳಿ ಹೂಡುತ್ತಿದ್ದರು. ಆದರೆ ಆ ಕಾಲಕ್ಕೆ ಸಫಲವಾಗಲಿಲ್ಲ. ದ್ವಿತೀಯ ಯುದ್ಧಾನಂತರ ಬ್ರಿಟಿಷ್ ಸರಕಾರವು ತ್ರಿಮಂತ್ರಿಗಳನ್ನು ಕಳುಹಿಸಿಕೊಟ್ಟು ಸಂವಿಧಾನ ರಚಿಸುವಂತೆ ಸಲಹೆಮಾಡಿತು. ಆ ಪ್ರಕಾರ 1946ನೇ ಡಿಸೆಂಬರಿನಲ್ಲಿ ರಾಜ್ಯಂಗರಚನಾ - ಸಭೆಯ ಮೊದಲನೆ ಅಧಿವೇಶನವು ದಿಲ್ಲಿಯಲ್ಲಿ ನಡೆಯಿತು.

ಶ್ರೀ ಬಾಬುರಾಜೇಂದ್ರಪ್ರಸಾದರು ಅಧ್ಯಕ್ಷರಾದರು. ಡಾ. ಬಿ. ಅಂಬೇಡ್ಕರರ ಅಧ್ಯಕ್ಷತೆಯಲ್ಲಿ ರಾಜ್ಯಾಂಗದ ಕರಡು ತಯಾರಿಸುವ ಸಮಿತಿಯು ನೇಮಕವಾಯಿತು. ಆರಂಭದಲ್ಲಿ ಲೀಗ್ ಪಕ್ಷದ ಪ್ರತಿನಿಧಿಗಳು ಭಾಗವಹಿಸದಕಾರಣ ಆ ಸಭೆಯು ಇಬ್ಭಾಗವಾಗಿ ಜರಗಲ್ಪಟ್ಟಿತು. ಆ ಮೇಲೆ ಶ್ರೀ ಅಂಬೇಡ್ಕರರು ತಯಾರಿಸಿದ ಸಂವಿಧಾನದ ಕರಡನ್ನು ರಾಜ್ಯಂಗಸಭೆಯು ಪರಿಶೀಲಿಸಿ, ಅಂಗೀಕಾರಮಾಡಿ ಭಾರತರಾಷ್ಟ್ರಕ್ಕೆ ಒಪ್ಪಿಸಿತು. ಹೀಗೆ ಜನ್ಮತಾಳಿದ

ಸಂವಿಧಾನವು 26-1-1950ರಂದು ಆಚರಣೆಗೆ ಬಂದಿದೆ ಅಂದಿನಿಂದ ಪ್ರತಿ ವರ್ಷವೂ ಜನವರಿ 26ರಂದು ಭಾರತದ ಗಣರಾಜ್ಯೋತ್ಸವವು ನಡೆಯುತ್ತಾ ಇದೆ.

ಇ) I 1) ಆ ನಿಯೋಗವು ಮಾಡಿದ ಕಾರ್ಯ:- (1946) ಭಾರತಕ್ಕೆ ಬಂದು ವಿವಿಧ ಪಕ್ಷಗಳ ಮುಖಂಡರನ್ನು ಕರೆದು ಚರ್ಚಿಸಿ, ತಮ್ಮ ಶಿಫಾರಸನ್ನು ಬ್ರಿಟಿಷ್ ಸರಕಾರಕ್ಕೆ ಸಾದರ ಪಡಿಸಿತು. ಅದರಲ್ಲಿ ಸಂವಿಧಾನವನ್ನು ರಚಿಸಲು, ರಾಜ್ಯಾಂಗ ಸಭೆಕೂಡಿಸುವಂತೆ ಸಲಹೆಮಾಡಿತು.

2) ರಾಜ್ಯಾಂಗ ಸಭೆಯ ಮೊದಲ ಅಧಿವೇಶನವು 1946ನೇ ಡಿಸೆಂಬರದಲ್ಲಿ ಡಿಲ್ಲಿಯಲ್ಲಿ ನಡೆದಿದೆ. ಅಧ್ಯಕ್ಷರಾಗಿ ಶ್ರೀ ರಾಜೇಂದ್ರಪ್ರಸಾದರು ಚುನಾಯಿತರಾಗಿದ್ದರು.. ಡಾ. ಬಿ. ಅಂಬೇಡ್ಕರರು ರಾಜ್ಯಾಂಗದ ಕರಡು ತಯಾರಿಸುವ ಸಮಿತಿಯ ಅಧ್ಯಕ್ಷರಾಗಿ ತಮ್ಮ ಸಮಿತಿಯ ಸದಸ್ಯರನ್ನು ಕೂಡಿಕೊಂಡು ಸಂಪೂರ್ಣ ಕರಡು ತಯಾರಿಸಿದರು. ಆ ಕರಡನ್ನು ರಾಜ್ಯಾಂಗಸಭೆಯು ಪರಿಶೀಲಿಸಿ ಚರ್ಚಿಸಿ, ತಿದ್ದಿ 26-11-1949ರಂದು ಅಂಗೀಕರಿಸಿ ಭಾರತ ರಾಷ್ಟ್ರಕ್ಕೊಪ್ಪಿಸಿತು. ಹೀಗೆ ನಮ್ಮ ಸಂವಿಧಾನವು ರಚಿಸಲ್ಪಟ್ಟಿತು.

3) ಪ್ರಾರಂಭದಲ್ಲಿ ಸೇರಿದ ರಾಜ್ಯಾಂಗ ರಚನಾ ಸಭೆಯಲ್ಲಿ ಮುಸ್ಲಿಂ ಲೀಗ್ ಭಾಗವಹಿಸಲಿಲ್ಲ. ಕಾರಣ - ಮುಸ್ಲಿಮರೇ ಹೆಚ್ಚಾಗಿರುವ ಪ್ರಾಂತಗಳೆಲ್ಲ ಸೇರಿ ಪ್ರತ್ಯೇಕ ರಾಷ್ಟ್ರವಾಗಬೇಕೆಂದು ಮೊದಲಾಗಿ ವಾದಹೂಡಿತ್ತು. ಅದರಂತೆ ಭಾರತ - ಪಾಕಿಸ್ತಾನಗಳೆಂಬ ಎರಡು ರಾಷ್ಟ್ರಗಳಾಗುವುದೇ ಸೂತ್ರವೆಂದು ಅಷ್ಟರಲ್ಲಿಯೇ ನಿರ್ಧಾರಕ್ಕೆ ಬಂದಿತು. ಹೀಗಾಗಿ ರಾಜಕೀಯದ ಬಿಕ್ಕಟ್ಟಿನಿಂದಾಗಿ ರಾಜ್ಯಾಂಗದ ಕಾರ್ಯದಲ್ಲಿ ಸ್ವಲ್ಪ ಅಡಚಣೆಯುಂಟಾಯಿತು.

4) ಸಂವಿಧಾನದಲ್ಲಿ ಭಾರತದ ಒಕ್ಕೂಟ, ರಾಜ್ಯಗಳ ಶಾಸನಾಂಗ, ಕಾರ್ಯಾಂಗ, ನ್ಯಾಯಾಂಗಗಳ ರೂಪರೇಷೆಗಳು, ಪೌರರ ಮೂಲಭೂತಹಕ್ಕುಗಳು, ಮತ್ತು ಇತರ ಸಂಬಂಧಪಟ್ಟ ನಿರ್ದೇಶಕ ತತ್ವ, ಇತ್ಯಾದಿಗಳು ವಿವರಿಸಲ್ಪಟ್ಟಿವೆ.

II ಬಿಟ್ಟ ಶಬ್ದಗಳು:— ಡಾ. ಬಿ. ಅಂಬೇಡ್ಕರರು 2) ರಾಜ್ಯಾಂಗ (ಪಾರ್ಲಿಮೆಂಟ್ 3) ಸಾರ್ವಭೌಮಗಣ ರಾಜ್ಯ 4) 1950ನೇ ಜನವರಿ 26 5) ಮೂಲಭೂತ ಗೊತ್ತುಗುರಿ ಗುರಿಗಳನ್ನು

III 1) ಬಾಬುರಾಜೇಂದ್ರಪ್ರಸಾದರು – ಇ) ರಾಜ್ಯಾಂಗ ಸಭೆಯ ಅಧ್ಯಕ್ಷರಾಗಿ ಚುನಾಯಿತರಾದರು 2) ಭಾರತದ ಸಂವಿಧಾನವನ್ನು – ಈ) ರಾಜ್ಯಾಂಗ ಸಭೆಯು ರಚಿಸಿತು 3) ರಾಜ್ಯಾಂಗ ಸಭೆಯ ಅಧಿವೇಶನಗಳು – ಅ) ಡಿಲ್ಲಿಯಲ್ಲಿ ನಡೆದುವು 4) ಸಂವಿಧಾನವನ್ನು ತಯಾರಿಸಲು – ಊ) ಸುಮಾರು ಮೂರು ವರ್ಷಗಳ ಕಾಲ ಹಿಡಿಯಿತು. 5) ಸಂವಿಧಾನವು ಜಾರಿಗೆ ಬಂದ ದಿನದಿಂದ-ಆ) ಭಾರತವು ಗಣರಾಜ್ಯವಾಯಿತು.

IV 1) ಶ್ರೀ ಬಾಬುರಾಜೇಂದ್ರಪ್ರಸಾದರ ಹುಟ್ಟೂರು - ಬಿಹಾರ ರಾಜ್ಯದ ಸಾರಣ ಜಿಲ್ಲೆಯ ಜೀರದಾಯಿಗ್ರಾಮ. ಜನನ 3-12-1884 ತೀರ್ಥರೂಪರು - ಮಹಾದೇವಸಹಾಯರು. ರಾಜೇಂದ್ರರು ಪ್ರಾರಂಭದಲ್ಲಿ ಪ್ರಾಥಮಿಕ ಶಿಕ್ಷಣವನ್ನು ತಮ್ಮ ಗ್ರಾಮದಲ್ಲಿ ಪೂರೈಸಿ, ಬವರಾಪಟ್ಟಣದ ಮಾಧ್ಯಮಿಕ ಶಾಲೆಯಲ್ಲಿ ಮ್ಯಾಟ್ರಿಕ್ ವರೆಗೆ ಕಲಿತು (1902) ಪ್ರಥಮ ಸ್ಥಾನ ಪಡೆದು ಪಾಸಾದರು.

ಅನಂತರ ಕಲ್ಕತ್ತೆಯ ಪ್ರಸಿಡೆನ್ಸಿ ಕಾಲೇಜಿಗೆ ಸೇರಿ ಅಲ್ಲಿನ ವಿಶ್ವವಿದ್ಯಾಲಯದ ಪ್ರಥಮ ಪರೀಕ್ಷೆಯಲ್ಲಿ (ಒಂದನೆಸ್ಥಾನ) ಬಿ. ಎ. ಪಾಸಾಗಿ M. A. ವರೆಗೆ ಓದಿ, ಒಂದು ವರ್ಷ ಕಾಲೇಜಿನ ಪ್ರಾಧ್ಯಾಪಕರಾದರು. ಮತ್ತೆ ಪಾಟ್ನಾ ಹೈಕೋರ್ಟಿನ ವಕೀಲರಾಗಿ ವರ್ಷಕ್ಕೆ 30-40 ಸಾವಿರರೂಪಾಯಿ ಉತ್ಪನ್ನವುಳ್ಳ ಸುಪ್ರಸಿದ್ಧ ನ್ಯಾಯವಾದಿಗಳಾದರು. 1921ರಲ್ಲಿ ವಕೀಲ್ ವೃತ್ತಿಯನ್ನು ಬಿಟ್ಟು ಗಾಂಧಿಯವರ ಸ್ವಾತಂತ್ರ್ಯ ಹೋರಾಟದಲ್ಲಿ ಸೇರಿ ದೇಶಸೇವಕರಾದರು

**ದೇಶಸೇವೆಗಳು:—** ಬಿಹಾರ್ ಭೂಕಂಪ - ಕ್ವೆಟ್ಟಾಭೂಕಂಪದ ವೇಳೆ ನಿರಾಶ್ರಿತರಿಗಾಗಿ ದುಡಿದರು. 1939ರಲ್ಲಿ ಕಾಂಗ್ರೇಸಿನ ಸೂತ್ರತ್ವ ವಹಿಸಿ, 1942ರಲ್ಲಿ ಚಲೇಜಾವ್ ಚಳವಳಿಯಲ್ಲಿ ದುಮುಕಿ ಸೆರೆಮನೆಗೆ ಹೋದರು. ಅಲ್ಲಿಂದ ಬಿಡೆಗಡೆಯಾದ ಮೇಲೆ ಘಟನಾ ಸಭೆಯ ಅಧ್ಯಕ್ಷರಾಗಿ ಮತ್ತೆ ಕೇಂದ್ರಸರಕಾರದ ಮಂತ್ರಿಗಳಾಗಿ, 1950ರಲ್ಲಿ ಸ್ವತಂತ್ರ ಭಾರತದ ಅಧ್ಯಕ್ಷರಾದರು. 1962ರ ವರೆಗೂ ರಾಷ್ಟ್ರಪತಿಗಳಾಗಿದ್ದು, ನಿವೃತ್ತರಾದ ಮೇಲೆ 28-2-1963ರಂದು ಪಾರ್ಥಿವದೇಹದಿಂದಗಲಿ ಕೀರ್ತಿಶೇಶರಾದರು. ಅಜಾತಶತ್ರುಗಳಂತಿದ್ದ ರಾಜೇಂದ್ರರು ಹಿಂದಿ, ಇಂಗ್ಲೀಷ್, ಪರ್ಶಿಯಾ ಭಾಷೆಗಳಲ್ಲಿ ನಿಪುಣರಿದ್ದರು. ಇವರು ಬರೆದ ಚಂಪಾರಣ್ಯ, ಸತ್ಯಾಗ್ರಹದ ಕಥೆ ಮೊದಲಾದುವು ಸಪ್ರುಸಿದ್ಧವಾಗಿವೆ.

2) ಪಠ್ಯಪುಸ್ತಕದ [redacted] ಸಂವಿಧಾನದ ಪೀಠಿಕೆಯನ್ನೋದಿ ದಪ್ಪಕ್ಷರಗಳಲ್ಲಿ ಬರೆದಿಡುವುದು.

ಉ) ಭಾರತ ಸಂವಿಧಾನದ ನಾಲ್ಕು ಆಧಾರಸ್ತಂಭಗಳು:—

1) ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ನ್ಯಾಯ 2) ವಾಕ್ ವಿಚಾರ, ವಿಶ್ವಾಸ, ಧರ್ಮ ಮತ್ತು ಉಪಾಸನಾ ಸ್ವಾತಂತ್ರ್ಯ 3) ಸ್ಥಾನ ಮಾನ ಮತ್ತು ಅವಕಾಶಗಳಲ್ಲಿ ಸಮಾನತೆ. 4) ವ್ಯಕ್ತಿಗೌರವ ಮತ್ತು ರಾಷ್ಟ್ರೈಕ್ಯತೆಯನ್ನು ನೆಲೆಗೊಳಿಸುವ ಬಂಧುಭಾವನೆ

2) ಬ್ರಿಟಿಷ್ ಮಂತ್ರಿಮಂಡಲದ ನಿಯೋಗಿಗಳು— 1) ಫೆಥಿಕ್‌ಲಾರೆನ್ಸ್ (ಭಾರತ ಮಂತ್ರಿ) 2) ಅಲೆಕ್ಸಾಂಡರ್ (ನೌಕಾಮಂತ್ರಿ) 3) ಸರ್ ಸ್ಟಾಫರ್ಡ್‌ಕ್ರಿಪ್ಸ್

3) ನಮ್ಮ ಸಂವಿಧಾನವು ಎಲ್ಲಾ ರಾಷ್ಟ್ರಗಳ ಮೆಚ್ಚುಗೆಗೆ ಪಾತ್ರವಿದೆ. ಏಕೆಂದರೆ ನಮ್ಮ ಸಂವಿಧಾನವು ಸ್ವಾತಂತ್ರ್ಯ, ಸಮತೆ, ಪರಸ್ಪರ ಬಂಧು ಭಾವನೆ ಮತ್ತು ಆಶೆ ಆಕಾಂಕ್ಷೆಗಳನ್ನು ಪ್ರತಿಬಿಂಬಿಸುತ್ತಿದೆ. ಹಾಗೂ ಭಾರತೀಯರ ಉದಾತ್ತಧ್ಯೇಯಗಳನ್ನೂ ಒಳಗೊಂಡಿದೆ.

## 14 ಭಾರತ ಸಂವಿಧಾನದ ಕೆಲವು ಮುಖ್ಯಾಂಶಗಳು

ಅ) ಭಾರತವು ಸಾರ್ವಭೌಮ ಪ್ರಜಾರಾಜ್ಯ. ಇದು ಹಲವು ರಾಜ್ಯಗಳ ಒಕ್ಕೂಟ. ಕೇಂದ್ರಸರಕಾರವು ಬಲಿಷ್ಠವಿದ್ದರೂ ಅದರ ಘಟಕಗಳಾದ ರಾಜ್ಯಗಳಿಗೆ ಒಳಆಡಳಿತದಲ್ಲಿ ಸ್ವಾತಂತ್ರ್ಯವಿದೆ. ಕೇಂದ್ರ ಹಾಗೂ ರಾಜ್ಯ ಸರಕಾರಗಳು ಮಾಡಬಹುದಾದ ಶಾಸನಾಧಿಕಾರಗಳನ್ನು ಭಾರತದ ಸಂವಿಧಾನವು ಮೂರು ಪಟ್ಟಿಗಳಲ್ಲಿ ನಿರ್ದಿಷ್ಟಪಡಿಸಿದೆ

ಲಕ್ಷಣಗಳು:— ಭಾರತವು ವಿವಿಧ ಜನಾಂಗ, ವಿವಿಧ ಭಾಷ ವಿವಿಧ ಮತಧರ್ಮಗಳಿಂದ ಕೂಡಿದ್ದರೂ ಜಾತ್ಯತೀತ ರಾಷ್ಟ್ರವಾಗಿದೆ. ಆಡಳಿತ ದೃಷ್ಟಿಯಲ್ಲಿ ಯಾವ ಪಂಥಕ್ಕೂ ಸೇರಿಲ್ಲ. ಸಂವಿಧಾನದ ಪೀಠಿಕೆಯಲ್ಲಿಯೇ ಧಾರ್ಮಿಕ ಸ್ವಾತಂತ್ರ್ಯ - ಸಮಾನತೆ ಇತ್ಯಾದಿಗಳಲ್ಲಿ ಸ್ಪಷ್ಟಪಡಿಸಿರುವುದು. ಇಲ್ಲಿ ವಯಸ್ಕಮತದಾನ ಪದ್ಧತಿಯಿಂದ ಐದು ವರ್ಷಗಳಿಗೊಮ್ಮೆ ಮಹಾ ಚುನಾವಣೆ ನಡೆಯುವುದು.

ಮೊದಲ ಚುನಾವಣೆ 1952ರಲ್ಲಿ ನಡೆಯಿತು. (ಮತದಾರರು 14 ಕೋಟಿ) ಎರಡನೆ ಚುನಾವಣೆ 1957ರಲ್ಲಿ, ಮೂರನೆ ಚುನಾವಣೆ, 1962ರಲ್ಲಿ (ಮತದಾರರು 22 ಕೋಟಿ) ನಾಲ್ಕನೆ ಚುನಾವಣೆ 1967 (ಮತದಾರರು 24 ಕೋಟಿ. ಇಷ್ಟು ಅಧಿಕ ಸಂಖ್ಯೆಯ ಮತದಾರರು ಜಗತ್ತಿನ ಯಾವ ಪ್ರಜಾಪ್ರಭುತ್ವರಾಷ್ಟ್ರದಲ್ಲಿಯೂ ಇಲ್ಲ.

ಇ) I 1) ಭಾರತವು ತನ್ನ ದೇಶದ ಒಳಗಿನ ಮತ್ತು ಹೊರಗಿನ ಸಂಬಂಧಗಳಲ್ಲಿ ಯಾವ ರಾಷ್ಟ್ರಕ್ಕೂ ಅಧೀನವಲ್ಲ (ಸರ್ವಸ್ವತಂತ್ರ) ದೇಶದಾಡಳಿತವು ಸಂಪೂರ್ಣವಾಗಿ ಪ್ರಜೆಗಳಿಂದ ಚುನಾಯಿತರಾದ ಪ್ರತಿನಿಧಿಗಳಿಂದ ನಡೆಯುವುದು. ಇದಕ್ಕೆ ಸರ್ವಸ್ವತಂತ್ರ ಪ್ರಜಾಪ್ರಭುತ್ವವೆನ್ನುವರು.

2) ಒಕ್ಕೂಟ ಎಂದರೆ ಕೆಲವುರಾಜ್ಯಗಳು ಘಟಕಗಳಾಗಿ ಸೇರಿದ ಒಂದು ಕೂಟ. ಭಾರತದ ಒಕ್ಕೂಟದಲ್ಲಿ ಎರಡು ಸರಕಾರಗಳಿವೆ. 1, ಕೆಂದ್ರಸರಕಾರ 2) ರಾಜ್ಯಸರಕಾರಗಳು

3) ಶಾಸನ ಮಾಡಬಹುದಾದ ವಿಷಯಗಳ ಪಟ್ಟಿಗಳು ಮೂರು ಇವೆ. 1) ಕೇಂದ್ರಸರಕಾರವು ಮಾಡಬಹುದಾದ ಶಾಸನಗಳ ಪಟ್ಟಿ (ದೇಶ ರಕ್ಷಣೆ) ವಿಮೆ, ಅಂಚೆ; ರೈಲ್ವೆ ಇತ್ಯಾದಿ 2) ರಾಜ್ಯ ಸರಕಾರಗಳು ಮಾಡಬಹುದಾದ ಶಾಸನಗಳ ಪಟ್ಟಿ (ವಿದ್ಯೆ, ಕಂದಾಯ, ಅರಣ್ಯ, ಆರೋಗ್ಯ ಇತ್ಯಾದಿ 3) ಕೇಂದ್ರ ಮತ್ತು ರಾಜ್ಯ ಸರಕಾರಗಳು ಕೂಡಿ ಮಾಡಬಹುದಾದ ಶಾಸನಗಳ ಪಟ್ಟಿ (ಕಾರ್ಮಿಕ, ಕಾರ್ಖಾನೆ ಇತ್ಯಾದಿ)

4) ಭಾರತದ ಪೌರರು ತಮಗೆ ಸರಿತೋರಿದ ಪೂಜಾವಿಧಿಗಳಲ್ಲಿ ಸ್ವತಂತ್ರರು, ಅದರಿಂದ ಇತರರ ಧರ್ಮಸ್ವಾತಂತ್ರ್ಯಕ್ಕೆ ಅಡ್ಡಿಯಾಗಬಾರದು. ಆದರೆ ಸರಕಾರದ ಆಡಳಿತ ದೃಷ್ಟಿಯಲ್ಲಿ ಎಲ್ಲ ಪಂಥದವರೂ ಒಂದೇ. ಹೀಗಾಗಿ ಭಾರತವು ಜಾತ್ಯತೀತ ರಾಷ್ಟ್ರ. ಕಾರಣ - ಧರ್ಮವಿರಹಿತವಲ್ಲದ ಅಥವಾ ಧಾರ್ಮಿಕವಿರೋಧವಲ್ಲದ ರಾಷ್ಟ್ರಕ್ಕೆ ಜಾತ್ಯತೀತ ರಾಷ್ಟ್ರವೆನ್ನುವರು.

II 1) ಪಾರ್ಲಿಮೆಂಟ್ - ಶಾಸನಗಳನ್ನು ಮಾಡುವುದು.

2) ಮಂತ್ರಿಮಂಡಲ - ಕಾನೂನುಗಳನ್ನು ಜಾರಿಗೆ ತರುವುದು.

3) ನ್ಯಾಯಾಂಗ - ನಾಗರಿಕರ ಹಕ್ಕುಗಳನ್ನು ರಕ್ಷಿಸುವುದು

4) ಸಾರ್ವತ್ರಿಕ ಚುನಾವಣೆಗಳು - ಐದು ವರ್ಷಕ್ಕೊಮ್ಮೆ ನಡೆಯುವುದು

III 1) ರಾಜ್ಯವಿಭಾಗಗಳು = ೧೧ನೇ ಪಾಠದಲ್ಲಿ ತಿಳಿಸಲಾಗಿದೆ

ಉ) 1. ನಮ್ಮ ಪ್ರಜಾಪ್ರಭುತ್ವವು ವಿಶ್ವದಲ್ಲಿಯೇ ಅತಿದೊಡ್ಡ ಪ್ರಜಾಪ್ರಭುತ್ವ? – ಕಾರಣ – ಈಗ ನಮ್ಮ ರಾಷ್ಟ್ರದಲ್ಲಿ ಅನಕ್ಷರಸ್ಥರ ಸಂಖ್ಯೆ ಅತಿ ದೊಡ್ಡ ಪ್ರಮಾಣದಲ್ಲಿದೆ. ಆದರೂ ಇಪ್ಪತ್ತೊಂದು ವರ್ಷ ವಯಸ್ಸು ತುಂಬಿದ ಸ್ತ್ರೀಪುರುಷರಿಗೆಲ್ಲ ಮತದಾನದ ಹಕ್ಕಿದೆ. ಇಂತಹ ಪ್ರೌಢ ಮತದಾನ ಪದ್ಧತಿಯನ್ನು ವಿಧಾಯಕ ಮಾಡಿರುವುದು ನಮ್ಮ ರಾಷ್ಟ್ರದ ಉದಾತ್ತಧ್ಯೇಯವಾಗಿದೆ.

2) ನಮ್ಮದು ಪಾರ್ಲಿಮೆಂಟರಿ ಪದ್ಧತಿಯ ರಾಜ್ಯಭಾರ?

1) ಭಾರತದಲ್ಲಿ ಐದುವರ್ಷಕ್ಕೊಮ್ಮೆ ಸಾರ್ವತ್ರಿಕ ಚುನಾವಣೆ ನಡೆಯುವುದು 2) ಪ್ರಜೆಗಳಿಂದ ಚುನಾಯಿತರಾದ ಪ್ರತಿನಿಧಿಗಳಿಂದ ಆರಿಸಲ್ಪಟ್ಟ ರಾಷ್ಟ್ರಾಧ್ಯಕ್ಷನು ಭಾರತದ ಮುಖ್ಯಾಧಿಕಾರಿ, ಆತನ ಹೆಸರಿನಿಂದ ರಾಷ್ಟ್ರದ ಆಡಳಿತ ನಡೆಯುವುದು 3) ಆಡಳಿತೆಗೆ - ಕೇಂದ್ರ - ರಾಜ್ಯಗಳಲ್ಲಿ ಮಂತ್ರಿ ಸಂಪುಟಗಳು, ಶಾಸನ ತಯಾರಿಸುವುದಕ್ಕೆ - ಒಕ್ಕೂಟ - ಪಾರ್ಲಿಮೆಂಟ್, ರಾಜ್ಯಗಳಲ್ಲಿ - ವಿಧಾನಮಂಡಲಗಳು. ನ್ಯಾಯರಕ್ಷಣೆಗೆ ವರಿಷ್ಠಕೋರ್ಟು, ಹೈಕೋರ್ಟುಗಳಿವೆ. 4) ರಾಷ್ಟ್ರಪತಿಯು ಕೇಂದ್ರದ ಅಗ್ರಸ್ಥಾನದಲ್ಲಿದ್ದರೂ ಪಾರ್ಲಿಮೆಂಟಿಗೆ ಹೊಣೆಯಾಗಿರುವ ಮಂತ್ರಿಮಂಡಲದ ಮೂಲಕ ಆಡಳಿತ ನಡೆಸುವನು. ಇದರಿಂದ ಸರಕಾರದ ಕೊನೆಯಧಿಕಾರ ಪ್ರಜೆಗಳಿಗೆ ಸೇರಿದೆಯೆಂದು ತಿಳಿಯುವುದು.

## 15 ಪೌರತ್ವವೆಂದರೇನು?

ಅ) 1) ಮಾನವರು ಸಂಘಜೀವಿಗಳು. ಕುಟುಂಬ ಮೊದಲಾದುವೆಲ್ಲ ಸಂಘ ಜೀವನದ ವಿವಿಧರೂಪಗಳು. ಯಾವನಾಗಲಿ ಒಂದು ರಾಷ್ಟ್ರದಲ್ಲಿದ್ದರೆ ಆತನು ಆ ರಾಷ್ಟ್ರದ ಪೌರ ಅಥವಾ ನಾಗರಿಕ. ಹಾಗೆ ನಾವೆಲ್ಲರೂ ಭಾರತದ ಪೌರರು. ಭಾರತ ಯಾವ ರಾಜ್ಯದಲ್ಲಿದ್ದರೂ ಸರಿಯೆ!

2) ಪೌರತ್ವಬೇಕು - ಪ್ರತಿಯೊಬ್ಬನಿಗೂ ಅಭಿವೃದ್ಧಿ ಹೊಂದಿ ಸುಖದಿಂದ ಬಾಳಬೇಕೆಂಬ ಆಕಾಂಕ್ಷೆಗಳಿರುತ್ತವೆ, ಅವನ್ನು ಪೂರೈಸುವುದಕ್ಕಾಗಿ ಆ ಸರಕಾರವು ಒದಗಿಸಿಕೊಡುವ ಅನುಕೂಲತೆಗಳೇ ಆತನ ಹಕ್ಕುಗಳು

ತತ್ಫಲವಾಗಿ ಸರಕಾರಕ್ಕೆ ಮತ್ತು ಸಮಾಜಕ್ಕೆ ಸಲ್ಲಿಸುವ ಸೇವೆಗಳೇ ಆತನ ಕರ್ತವ್ಯಗಳು. ಹೀಗೆ ಅವೆರಡೂ ಒಂದಕ್ಕೊಂದು ನಿಕಟಸಂಬಂಧವುಳ್ಳವಾಗಿವೆ.

ಇ) 1) ಕುಟುಂಬ, ಶಾಲೆ, ಗ್ರಾಮ, ನಗರ, ರಾಜ್ಯ, ದೇಶ - ರಾಷ್ಟ್ರ ಹಾಗೂ ವಿಶ್ವ ಇವೆಲ್ಲ ಸಂಘಜೀವನದ ವಿವಿಧ ರೂಪಗಳು.

2) ಆಡಳಿತೆಯ ಅನುಕೂಲಕ್ಕಾಗಿ ರಾಜ್ಯಗಳಿರುತ್ತವೆ. ಅಂತಹ ಹಲವುರಾಜ್ಯಗಳ ಕೂಟದಿಂದ ಸರಕಾರವು ನಡೆಯುತ್ತಿದ್ದರೆ ರಾಷ್ಟ್ರವೆನಿಸುವುದು ಉದಾ- ಪಾಕಿಸ್ಥಾನ, ಅಫಘಾನಿಸ್ಥಾನ, ಬರ್ಮಾ, ರಷ್ಯಾ, ಜಪಾನ್ ಇತ್ಯಾದಿ.

3) ಈ ದೇಶದಲ್ಲಿ ಹುಟ್ಟಿದ ಪ್ರತಿಯೊಬ್ಬನಿಗೂ ಈ ರಾಷ್ಟ್ರದ ಪೌರತ್ವ ವಿದೆ. ಬೇರೆ ದೇಶದವನಾದರೆ ಇಲ್ಲಿಯೇ ಕೆಲಕಾಲವಿದ್ದು ಈ ದೇಶದ ಕಾನೂನುಗಳಿಗೆ ಒಳಪಟ್ಟರೆ ಅವನಿಗೂ ಈ ದೇಶದ ಪೌರತ್ವಬರುವುದು. ಆದರೆ ಒಂದೇ ಕಾಲಕ್ಕೆ ಎರಡು ರಾಷ್ಟ್ರಗಳ ಪೌರನಾಗುವುದಿಲ್ಲ.

4) ಪ್ರತಿಯೊಬ್ಬನೂ ವೃದ್ಧಿಹೊಂದಿ ಸುಖದಿಂದ ಬಾಳಬೇಕೆಂದೇ ಬಯಸುತ್ತಾನೆ. ಆ ಬಯಕೆಯು ಈಡೇರಬೇಕಾದರೆ ಅವನ ವ್ಯಕ್ತಿತ್ವವು ವಿಕಾಸವಾಗಬೇಕು. ಅದಕ್ಕಾಗಿ ರಾಷ್ಟ್ರಸರಕಾರವು ಒದಗಿಸಿಕೊಡುವ ಸೌಕರ್ಯಗಳೇ ಆತನ ಹಕ್ಕುಗಳು

5) ರಾಷ್ಟ್ರದಿಂದ ದೊರಕಿದ ಅನುಕೂಲತೆ ಪ್ರತಿಯಾಗಿ ಪೌರ ರಾದವರು ಸರಕಾರಕ್ಕೆ ಹಾಗೂ ಸಮಾಜಕ್ಕೆ ಸಲಿಸಬೇಕಾದ ಸೇವೆಗಳಿಗೆ ಕರ್ತವ್ಯಗಳೆನ್ನುವರು.

II 1) ಹಕ್ಕುಗಳೂ ಕರ್ತವ್ಯಗಳೂ - ಒಂದೇ ನಾಣ್ಯದ ಎರಡು ಮುಖಗಳು 2) ಪೌರಶಬ್ದವು - ಪುರಶಬ್ದದಿಂದ ಬಂದಿದೆ 3) ರಾಜ್ಯಕ್ಕೆ ಪ್ರತ್ಯೇಕ - ಪೌರತ್ವವಿಲ್ಲ 4) ಯಾರಿಗೂ ಒಂದೇ ಕಾಲದಲ್ಲಿ - ಎರಡು ರಾಷ್ಟ್ರಗಳ ಪೌರತ್ವ ಇರಲಾರದು.

## 16 ಪೌರನ ಹಕ್ಕುಗಳೂ ಕರ್ತವ್ಯಗಳೂ

ಅ) ಮೂಲಭೂತ ಹಕ್ಕುಗಳು- 1) ಸಮಾನತೆ (ಸಮಾಜದಲ್ಲಿ ಅಸ್ಪೃ

ಶ್ಯತೆಯಿಲ್ಲ. ಆಡಳಿತದಲ್ಲಿ ಸರಿಸಮಾನತೆಯ ಹಕ್ಕು 2) ವ್ಯಕ್ತಿಸ್ವಾತಂತ್ರ್ಯ ವೃತ್ತಿ. ಉದ್ಯೋಗ, ಸಂಚಾರ, ಪ್ರಾಣ, ಸಂಘ, ವಾಕ್ ಸ್ವಾತಂತ್ರ್ಯತೆಯ ಹಕ್ಕು. 3) ಧಾರ್ಮಿಕ ಸ್ವಾತಂತ್ರ್ಯ - ಇಷ್ಟವಾದ ಧರ್ಮಪೂಜಾ ವಿಧಿಗಳ ನ್ನನುಸರಿಸುವ ಹಕ್ಕು 4) ಶಿಕ್ಷಣ ಸ್ವಾತಂತ್ರ್ಯ - ಭಾಷೆ, ಲಿಪಿ ಹಾಗೂ ಸಂಸ್ಕೃತಿಯನ್ನು ಕಾಪಾಡುವ ಹಕ್ಕು 5) ಆಸ್ತಿ ಸ್ವಾತಂತ್ರ್ಯ - ಆಸ್ತಿ ಗಳಿಸುವ, ಉಪಯೋಗಿಸುವ, ಮಾರಾಟಮಾಡುವ ಹಕ್ಕು 6) ಸಂವಿಧಾ ನಾತ್ಮಕ ಪರಿಹಾರ ಪಡೆಯುವ ಸ್ವಾತಂತ್ರ್ಯ ಹಕ್ಕುಗಳಿಗೆ ಧಕ್ಕೆಬಂದರೆ; ಕೋರ್ಟು ಮೂಲಕ ಪರಿಹಾರ ಪಡೆಯುವ ಹಕು- **ಹಕ್ಕುಗಳ ಪರಿಮಿತಿ:-** ಪೌರರು ಈ ಹಕ್ಕುಗಳನ್ನು ಇತರರಿಗೆ ಹಾನಿಯಾಗದಂತೆ, ಸಮಾಜದ ಹಿತಕ್ಕೆ ಅಡ್ಡಿಯಾಗದಂತೆ ಉಪಯೋಗಿಸುವುದು ಅತ್ಯಗತ್ಯ.

**ರಾಜಕೀಯ ಹಕ್ಕುಗಳು:-** 1) ವಯಸ್ಕಮತದಾನದ ಹಕ್ಕು 2) ಶಾಸನಸಭೆಗಳಿಗೆ ಉಮೇದ್ವಾರನಾಗುವ ಹಕ್ಕು 3) ರಾಜ್ಯ ಅಥವಾ ರಾಷ್ಟ್ರ ಸರಕಾರದ ನೌಕರಿಹೊಂದುವ ಹಕ್ಕು 4) ವಿದೇಶ ಸಂಚಾರದಲ್ಲಿ ಸಂರಕ್ಷಣೆಯ ಹಕ್ಕು.

**ಕರ್ತವ್ಯಗಳು:—** ಹಕ್ಕುಗಳ ಸಫಲತೆಗೆ ಪೌರರ ಕರ್ತವ್ಯಗಳೂ ಅವಶ್ಯ. ಇಲ್ಲವಾದರೆ ಸಮಾಜ ಹಾಗೂ ರಾಷ್ಟ್ರ ವುಳಿಯಲಾರದು. ಹಕ್ಕುಗಳನ್ನು ಸಾಧಿಸಿದಂತೆ ಕರ್ತವ್ಯಗಳನ್ನು ನಡೆಸಿದರೆ ತಮ್ಮ ಉದ್ಧಾರದೊಡನೆ ರಾಷ್ಟ್ರಾಭಿವೃದ್ಧಿಯಾಗುವುದು..

ಇ) I) ಸಮಾನತೆಯ ಹಕ್ಕು, ವ್ಯಕ್ತಿಸ್ವಾತಂತ್ರ್ಯದ ಹಕ್ಕು ಧಾರ್ಮಿಕ ಸ್ವಾತಂತ್ರ್ಯದಹಕ್ಕು, ಭೂಸ್ವಾಮಿತ್ವದ ಹಕ್ಕು, ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಹಕ್ಕು. ಸಂವಿಧಾನಾತ್ಮಕ ಪರಿಹಾರದ ಹಕ್ಕು-ಈ ಮೂಲಭೂತ ಹಕ್ಕುಗಳ ಸ್ಪಷ್ಟೀಕರಣವು ಸಂವಿಧಾನದಲ್ಲಿ ನಿರ್ದೇಶಿಸಲಾಗಿದೆ.

2) **ಕಡ್ಡಾಯದ ಕರ್ತವ್ಯಗಳು:—** 1) ರಾಷ್ಟ್ರನಿಷ್ಠೆ - ರಾಷ್ಟ್ರದ ಕಾನೂನುಗಳಿಗೆ ವಿಧೇಯನಾಗುವುದು 2) ತೆರಿಗೆಗಳನ್ನು ಸಕಾಲಕ್ಕೆ ಸಲಾಯಿಸುವುದು (ಇಲ್ಲವಾದರೆ ಸರಕಾರದ ಆಡಳಿತ ನಡೆಯದು 3) ದೇಶ ರಕ್ಷಣೆಗಾಗಿ ದುಡಿಯುವುದು) (ಇಲ್ಲವಾದರೆ ದೇಶಕ್ಕೆ ಗಂಡಾಂತರವಿದೆ)

**ಐಚ್ಛಿಕ ಕರ್ತವ್ಯಗಳು:-** ಯೋಗ್ಯರಿಗೆ ಮತದಾನ ಮಾಡುವುದು, ರಾಷ್ಟ್ರದ ಉತ್ಪನ್ನ ಹೆಚ್ಚಿಸುವುದು, ನೆರೆಹೊರೆಯವರ ಆರೋಗ್ಯ ರಕ್ಷಣೆ, ವಿದ್ಯಾದಾನ ಹಾಗೂ ವಿದ್ಯಾಸಂಸ್ಥೆಗಳ ಸ್ಥಾಪನೆ, ಬಡವರಿಗೆ ನೆರವಾಗುವುದು ಸತ್ಯ ಸಾಕ್ಷಿಗಳನ್ನು ಹೇಳುವುದು ಇತ್ಯಾದಿ

3) **ದೇಶರಕ್ಷಣೆಯು ಪವಿತ್ರ ಕರ್ತವ್ಯ.** ದೇಶಕ್ಕೆ ಗಂಡಾಂತರ ವೊದಗಿದಾಗ ಪ್ರತಿಯೊಬ್ಬ ಪೌರನೂ ಸೈನ್ಯದಲ್ಲಿ ಸೇರಿ ಸೇವೆಸಲ್ಲಿಸಬೇಕು. ಇಲ್ಲವಾದರೆ ವೈಯುಕ್ತಿಕ ಜೀವನ ಹಾಳಾಗುವುದು. ಒಮ್ಮೊಮ್ಮೆ ಅಶಾಂತಿ ಯುಂಟಾಗಬಹುದು. ಆ ಸಂದರ್ಭ ಸರಕಾರದೊಡನೆ ಸಹಕರಿಸಿ ರಾಷ್ಟ್ರದಲ್ಲಿ ಆಂತರಿಕ ಶಾಂತಿಯುಂಟಾಗುವಂತೆ ಪ್ರಯತ್ನಿಸಬೇಕು.

4) ಜಾತ್ಯತೀತ ರಾಷ್ಟ್ರವೆಂದರೆ ಧರ್ಮರಹಿತವಾದ ಧಾರ್ಮಿಕವಿರೋಧ ವಾದ ರಾಷ್ಟ್ರವಲ್ಲ. ಆ ರಾಷ್ಟ್ರದಲ್ಲಿ ಪೌರರು ತಮಗೆ ಸರಿತೋರಿದ ಧರ್ಮ ಪೂಜಾವಿಧಿಗಳಲ್ಲಿ ಸ್ವತಂತ್ರರು. ಸರಕಾರದ ಆಡಳಿತ ದೃಷ್ಟಿಯಲ್ಲಿ ಎಲ್ಲ ಪಂಥದವರೂ ಎಲ್ಲ ಜಾತಿಯವರೂ ಒಂದೇ, ಸಮಾನರು. ಇಂತಹ ರಾಷ್ಟ್ರವು ಜಾತ್ಯತೀತ ರಾಷ್ಟ್ರ

II ತುಂಬತಕ್ಕ ಪದಗಳು 1) ಸರಿಸಮಾನವಾಗಿ 2) ವಾಸಿಸುವ ಹಕ್ಕು 3) ಕರ್ತವ್ಯಗಳು 4) ಪ್ರತಿನಿಧಿಗಳೇ

III) 1) ಪ್ರಜೆಗಳು ಸರಕಾರಕ್ಕೆ - ತೆರಿಗೆಗಳನ್ನು ಕೊಡಬೇಕು.

2) ಇನ್ನುಮುಂದೆ ಯುದ್ಧಗಳಾಗದಂತೆ - ವಿಶ್ವಸಂಸ್ಥೆಯು ಪ್ರಯತ್ನಿಸುತ್ತದೆ.

3) ರಾಷ್ಟ್ರದ ರಕ್ಷಣೆಯು - ಪ್ರತಿಯೊಬ್ಬನ ಪವಿತ್ರ ಕರ್ತವ್ಯ

4) ಕಡ್ಡಾಯದ ಕರ್ತವ್ಯಗಳನ್ನು - ಯಾರೂ ಅಲಕ್ಷಿಸಬಾರದು.

ಉ) ಅಭ್ಯಾಸಿಗಳ ಅನುಭವಕ್ಕಾಗಿ:—

1) **ಭಾರತದ ರಾಷ್ಟ್ರಾಧ್ಯಕ್ಷರು:—** 1) ಡಾ. ಬಾಬುರಾಜೇಂದ್ರ ಪ್ರಸಾದರು (1952-1957-1962 2) ಡಾ. ಎಸ್ ರಾಧಾಕೃಷ್ಣನ್

ಅವರು (1962-1967 3) ಝಕೀರ್‌ಹುಸೇನ್ ಅವರು (1967-3-5-1969) 4) ಶ್ರೀ ವಿ. ವಿ. ಗಿರಿಯವರು (1969)

2) **ಉಪರಾಷ್ಟ್ರಾಧ್ಯಕ್ಷರು:—** 1) ಡಾ. ಎಸ್. ರಾಧಾಕೃಷ್ಣನ್ (1952-1962) 2) ಡಾ. ಜಕೀರ್‌ಹುಸೇನರು (1962-1967) 3) ಶ್ರೀ ವಿ. ವಿ. ಗಿರಿಯವರು (1967-) 4) ಶ್ರೀ ಜಿ. ಎಸ್. ಪಾಠಕ್ (1969)

3) **ಭಾರತದ ಪ್ರಧಾನ ಮಂತ್ರಿಗಳು:-** 1) ಪಂಡಿತಜವಾಹರ ಲಾಲ್‌ನೆಹರು 1947-1964) 2) ಶ್ರೀ ಜಿ. ಎಲ್. ನಂದಾ (ತಾತ್ಕಾಲಿಕ 3) ಶ್ರೀ ಲಾಲ್‌ಬಹದ್ದೂರ್‌ಶಾಸ್ತ್ರಿ (1964-1966) ಶ್ರೀ ಜಿ. ಎಲ್. ನಂದಾ (ತಾತ್ಕಾಲಿಕ) ಶ್ರೀಮತಿ ಇಂಧಿರಾಗಾಂಧಿಯವರು) (26-1-1966)

4) **ಹೊಂದಿಸಿ ಬರೆಯುವುದು.**

**ಅ) ಸರ್ವಶ್ರೀಗಳು** 1) ಡಾ. ತ್ರಿಗುಣಸೇನ್ 2) ಸ್ವರಣಸಿಂಗ್ 3) ವೀರೇಂದ್ರಪಾಟೀಲ್ 4) ಎಸ್. ಎಸ್. ಮೋನಿಕ್‌ಷಹಾ 5) ವೈ. ಬಿ. ಚವಾನ್, 6) ಪ್ರೊ. ಎ. ಕೆ. ಆರ್. ರಾವ್ 7) ಹಿದಾಯ್ತು ಲ್ಲಾಖಾನ್ 8) ಯು. ಥಾಂಟ್ 9) ಕೆ. ವಿ. ಶಂಕರಗೌಡ 10) ವಿಜಯಲಕ್ಷ್ಮಿಪಂಡಿತ್ 11) ಜಗಜ್ಜೀವನರಾಮ್ 12) ಕೊಠಾವಳೆ 13) ಧರ್ಮವೀರರು

**ಉ)** ಕೇಂದ್ರದವಿದ್ಯಾಮಂತ್ರಿ 6) ಮೈಸೂರಿನ ಮುಖ್ಯಮಂತ್ರಿ 3) ಮಹಾದಂಡನಾಯಕ 4) ಸುಪ್ರಿಂಕೋರ್ಟಿನ ಚೀಫ್‌ಜಸ್ಟೀಸ್ 7) ಕೇಂದ್ರದ ಗೃಹಮಂತ್ರಿ 5) ವಿಶ್ವಸಂಸ್ಥೆಯ ಮುಖ್ಯ ಕಾರ್ಯದರ್ಶಿ 8) ಮೈಸೂರಿನ ವಿದ್ಯಾಮಂತ್ರಿ 9) ಮೈಸೂರಿನ ರಾಜ್ಯಪಾಲ 13) ಕೇಂದ್ರದ ಆಹಾರ ಮಂತ್ರಿ||)

## 17 ಕೈಗಾರಿಕಾ ಕ್ರಾಂತಿ

**ಅ)** ಹದಿನೆಂಟನೆಯ ಶತಮಾನದ ಉತ್ತರಾರ್ಧದಿಂದ ಗುಡಿಕೈಗಾರಿಕೆ ಗಳ ಬದಲು ಯಂತ್ರಕೈಗಾರಿಕೆಗಳು ಬೆಳೆದುವು. ಈ ಬದಲಾವಣೆಯು

(ಕ್ರಾಂತಿ) ಇತರ ಔದ್ಯೋಗಿಕ ಕ್ಷೇತ್ರಗಳಲ್ಲೂ ಹರಡಿದುದರಿಂದ ಔದ್ಯೋಗಿಕ ಕ್ರಾಂತಿಯೆನ್ನುವರು.

**ವೈಜ್ಞಾನಿಕಯುಗ:—** ಯಂತ್ರಗಳನ್ನು ನಡೆಸಲು ವಿವಿಧ ಶಕ್ತಿಗಳು ಬಳಕೆಗೆಬಂದುವು. ಮಾನವರ ಹಾಗೂ ಪ್ರಾಣಿಗಳ ಶಕ್ತಿಯ ಬದಲಿಗೆ ಆವಿಯ ಶಕ್ತಿ, ಅದರ ಜೊತೆಗೆ ವಿದ್ಯುಚ್ಛಕ್ತಿ, ಕಲ್ಲಿದ್ದಲು ಹಾಗೂ ಪೆಟ್ರೋಲಿಯಂ ಎಣ್ಣೆ ಇವುಗಳಿಂದ ಕೈಗಾರಿಕೆಗಳು ಹೆಚ್ಚಿ ವಿಜ್ಞಾನವು ಮುಂದುವರಿಯಿತು. ಈಗ ಅಣುಶಕ್ತಿಯೂ ಉಪಯೋಗಕ್ಕೆಬಂದು ಅಣುಯುಗವೆನಿಸಿದೆ.

**ಕೈಗಾರಿಕೆಗಳ ಪ್ರಗತಿ:—** ಯಂತ್ರಕೈಗಾರಿಕೆಯು ಮೊದಲು ಬ್ರಿಟನಿನಲ್ಲಾರಂಭವಾದರೂ ಈಗ ಇಡಿ ಪ್ರಪಂಚವನ್ನಾವರಿಸಿದೆ. ವಸಾಹತುಗಳೂ ಮಾರ್ಗಗಳೂ ಹೆಚ್ಚಿದ ಮೇಲೆ ವ್ಯಾಪಾರವು ವೃದ್ಧಿಹೊಂದಿದೆ. ಆರಂಭದಲ್ಲಿ ಬಟ್ಟೆಯಬೇಡಿಕೆ ಹೆಚ್ಚಾದಂತೆ ನೂಲುವ ಯಂತ್ರ, ನೀರ್ಗಾಲಿಯ ಯಂತ್ರ ಆವಿಯ ಯಂತ್ರ, ನಾನಾ ಯಂತ್ರದ ಮಗ್ಗಗಳೂ ರೈಲ್ವೆಬಂಡಿಗಳೂ ಬಳಕೆಗೆ ಬಂದು ಬಟ್ಟೆಯ ಗಿರಣಿಗಳು ತುಂಬಾ ವೃದ್ಧಿಹೊಂದಿದುವು.

ಇಂದಿಗೆ ಕೈಗಾರಿಕೆಯಲ್ಲಿ ಬಹಳ ಮುಂದರಿದ ರಾಷ್ಟ್ರಗಳೆಂದರೆ ಚತುರ್ಮಹಾರಾಷ್ಟ್ರಗಳು:— 1) ಯುನೈಟೆಡ್‌ಕಿಂಗ್‌ಡಂ 2) ಅಮೇರಿಕಾಸಂಯುಕ್ತ ಸಂಸ್ಥಾನಗಳು 3) ರಷ್ಯಾ 4) ಜಪಾನ್

ಇ) I) 1) ಯಂತ್ರಗಳಿಂದ ಕೆಲಸ ನಡೆಸುವುದು ಅಥವಾ ಯಂತ್ರಗಳಿಂದ ವಸ್ತುಗಳನ್ನು ತಯಾರಿಸುವುದು. ಹೀಗೆ ಗುಡಿಕೈಗಾರಿಕೆಯ ಬದಲಾದ ಯಂತ್ರ ಕೈಗಾರಿಕೆಗೆ ಕೈಗಾರಿಕಾ ಕ್ರಾಂತಿಯೆನ್ನುವರು.

2) ನೀರಿನ ಆವಿಯ ಶಕ್ತಿ, ವಿದ್ಯುಚ್ಛಕ್ತಿ, ಕಲ್ಲಿದ್ದಲು ಮತ್ತು ಪೆಟ್ರೋಲಿಯಂ ಎಣ್ಣೆ - ಯಂತ್ರಗಳನ್ನು ನಡೆಸುವ ವಿವಿಧ ಶಕ್ತಿಗಳು. ಇತ್ತೀಚೆಗೆ ಅಣುಶಕ್ತಿಯು ಬಳಕೆಗೆ ಬಂದಿದೆ.

II 1) ಜಾರ್ಜ್‌ಸ್ಟೀವನ್‌ಸನ್ ರಾಕೇಟ್

| | | |
|---|---|---|
| 2) ಹಾರ್‌ಗ್ರೀವ್ಸ್ | — | ಸ್ಪಿನ್ನಿಂಗ್ ಜೆನ್ನಿ |
| 3) ಜಾನ್‌ಕೇ | — | ಪ್ಲೈಯಿಂಗ್‌ಷಟಲ್ |
| 4) ಎಲಿ | — | ಕಾಟನ್‌ಜಿನ್ |
| 5) ಜೇಮ್ಸ್‌ವಾಟ್ | — | ನೀರಿನ ಆವಿಯ ಯಂತ್ರ |
| 6) ಆರ್ಕ್‌ರೈಟ್ | — | ಯಂತ್ರದ ಮಗ್ಗ |

## III ಯುರೋಫ್ ಖಂಡದಲ್ಲಿರುವ ದೇಶಗಳು

ಯುನೈಟೆಡ್‌ಕಿಂಗ್‌ಡಂ, ಐಯರ್ಲೆಂಡ್, ಪೋಲೆಂಡ್, ಫ್ರಾನ್ಸ್, ಬೆಲ್ಜಿಯಂ, ಸ್ಪೈನ್, ಪೋರ್ಚುಗಲ್, ಇಟಲಿ, ಜರ್ಮನಿ ಗ್ರೀಸ್, ಹಂಗೇರಿಯಾ, ಬಲ್ಗೇರಿಯಾ, ರುಮೇನಿಯಾ, ಯುಗಾಸ್ಲೋವಿಯಾ, ಝೆಕೋಸ್ಲೋವೇಕಿಯಾ, ಆಸ್ಟ್ರಿಯಾ, ಟರ್ಕಿ, ಯುರೋಫ್, ರಷ್ಯಾ, ಫಿನ್ಲೆಂಡ್, ಸ್ವೀಡನ್. ನಾರ್ವೆ, ಡೆನ್ಮಾರ್ಕ್, ಸ್ವಿಜರ್ಲೆಂಡ್. ಬಾಲ್ಕಾನ್ ರಾಷ್ಟ್ರಗಳು.

2) ಸುಮಾರು 8505 ಕಿಲೋಮೀಟರ್ ದೂರದಲ್ಲಿದೆ.

3) ಹಾರ್‌ಗ್ರೀವ್ಸ್ (ಕ್ರಿ. ಶ. 1764) 2) ಆರ್ಕ್‌ರೈಟ್ - 1769 3) ಎಲಿ - 1773 4) ಜೇಮ್ಸ್‌ವಾಟ್ - 1780) 5) ಸ್ಟೀವನ್‌ಸನ್ 1829

ಉ) ಇಂದಿಗೆ ಕೈಗಾರಿಕಾ ಪ್ರಪಂಚವೆಂದು ಹೇಳುತ್ತಾರೆ ಏಕೆ? ಕೈಗಾರಿಕಾಕ್ರಾಂತಿ ಬ್ರಿಟನಿನಲ್ಲಾರಂಭವಾದರೂ ಯುರೋಫ್ ಖಂಡದ ದೇಶಗಳಲ್ಲಿ ಹಬ್ಬಿ ಅಮೇರಿಕಾ ಸಂಸ್ಥಾನ ಮತ್ತು ಕೆನಡಾ ದೇಶಕ್ಕೆ ಹಬ್ಬಿತು. ಮತ್ತೆ ಏಷ್ಯಾ ಆಸ್ಟ್ರೇಲಿಯಾ ದೇಶಗಳಲ್ಲಾಗಿ ಇಂದಿಗೆ ಪ್ರಪಂಚವನ್ನೇ ಆವರಿಸಿದೆ.

2) ಯಂತ್ರಕೈಗಾರಿಕೆಗೆ ಬೇಕಾದ ಅನುಕೂಲತೆಗಳು ಯಾವುವು?

1) ಭಂಡವಾಳ - ಮೂಲಧನ 2) ಕಚ್ಚಾವಸ್ತುಗಳು 3) ಉತ್ತಮ

ಸಾರಿಗೆ ಸಂಪರ್ಕಗಳು 4) ಸನ್ನಿವೇಶ ಮತ್ತು ವಾಯುಗುಣ 5) ಯಂತ್ರ ಚಾಲಕ ಶಕ್ತಿ 6) ನಿಪುಣ ಕೆಲಸಗಾರರು. 7) ಮಾರುಕಟ್ಟೆಗಳು 8) ಸರಕಾರದ ಸಹಾಯ 9) ತಾಂತ್ರಿಕ ಶೋಧಗಳು 10) ಉತ್ತಮ ಆಡಳಿತ

3) ಕೈಗಾರಿಕಾಕ್ರಾಂತಿಯಿಂದ ಜನಜೀವನದಲ್ಲಾದ ಬದಲಾವಣೆಗಳೇನು? - ಮೊದಲು ವ್ಯವಸಾಯಗಾರರಾಗಿದ್ದ ಅನೇಕ ಜನರು ಕೈಗಾರಿಕೆಯ ಕೆಲಸಕ್ಕಿಳಿದರು. ಉಣ್ಣೆ, ಹತ್ತಿ, ಟರ್ಲಿನ್ ಬಟ್ಟೆಗಳ ಹಾಗೂ ಯಂತ್ರಗಳ ತಯಾರಿಕೆಯಲ್ಲಿ, ವಾಹನಗಳ ಉಕ್ಕು ಮತ್ತು ಇತ್ಯಾದಿ ಸಾಮಾನುಗಳ ತಯಾರಿಕೆಯ ಯಂತ್ರಕೈಗಾರಿಕೆಯಲ್ಲಿ ಆಸಕ್ತರಾದರು. ಹಾಗೆ ವಿಜ್ಞಾನ, ವ್ಯವಸಾಯ ಸಾರಿಗೆಸಂಪರ್ಕ, ಶಿಕ್ಷಣ, ವೈದ್ಯಕೀಯ ಮುಂತಾದ ಕ್ಷೇತ್ರಗಳಲ್ಲಿ ಹೆಚ್ಚಿನ ಬದಲಾವಣೆಗಳಾದವು. ಇದರಿಂದ ಕೆಲವೇ ಜನ ಶ್ರೀಮಂತರಾದರು. ಹಲವರು ಕೈಗಾರಿಕೆಗಳ ಪಟ್ಟಣ ಸೇರಿದರು.

4) ಬಿಟ್ಟಶಬ್ದಗಳು ಆವರಣದಲ್ಲಿವೆ.

1) ವಿಲಿಯಂಸಿಮಿಂಗ್‌ಟನ್‌ನು ದೋಣಿ ನಡೆಸುವ – ಉಪಯೋಗಿಸಿದ (ಆವಿಯಂತ್ರವನ್ನು) 2) ಸರ್‌ಹಂಪ್ರಿಡೇವಿ ಗಣಿಗಳಲ್ಲಿ ಉಪಯೋಗಿಸತಕ್ಕ- ಶೋಧಿಸಿದ (ಸೇಫ್ಟಿಲೇಂಪ್ 3) ಕ್ರಾಂಪ್‌ಟನ್‌ನು – – ಉಪಯೋಸುವ ವಿಧಾನ ಕಂಡುಹಿಡಿದನು. (ಕಲ್ಲಿದ್ದಲು, ಕೋಕ್)

5) ಶೋಧನೆಗಳೂ ಶೋಧಕರೂ 1) ಟೆಲಿಗ್ರಾಫ್ – ಸಾಮ್ಯುವೆಲ್ ಮೋರ್ 2) ಟೆಲಿಫೋನ್ (ದೂರವಾಣಿ) – ಅಲೆಗ್ಸಾಂಡರ್‌ಬೆಲ್ 3) ರೇಡಿಯೋ (ಅಲೆಯಂಚೆ) – ಮಾರ್ಕೋನಿ 4) ಟೆಲಿವಿಜನ್ – ಬೆಯಾರ್ಡ್ 5) ಮುದ್ರಾಯಂತ್ರ – ಕ್ಯಾಕ್ಸ್‌ಟನ್ 6) ವಿಮಾನ – ರೈಟ್‌ಸೋದರರು 7) ದೂರದರ್ಶಕ - ಗೆಲಲಿಯೋ 8) ಉಗಿಯಂತ್ರ - ನ್ಯೂಕೊಮೆನ್

**18 ಯುನೈಟೆಡ್ ಕಿಂಗ್‌ಡಂ** ಸಂಯುಕ್ತರಾಜ್ಯ

ಅ) ಗುಣಸ್ವಭಾವಗಳು:— ಬ್ರಿಟಿಷರು ಸ್ವಾತಂತ್ರ್ಯಪ್ರಿಯರು, ಕ್ರಿಯಾಶೀಲರು, ವಿಜ್ಞಾನ – ಕೈಗಾರಿಕೆಗಳಲ್ಲಿ, ನೌಕಾಯಾನ - ವ್ಯಾಪಾರ

ಗಳಲ್ಲಿ ನಿಪುಣರು. ಪ್ರಜಾಸತ್ತಾತ್ಮಕ ಆಡಳಿತ ಸ್ಥಾಪಿಸಿದವರಲ್ಲಿ ಮೊದಲಿಗರು, ಇಂತಹ ಗುಣಗಳಿಗೆ ಅಲ್ಲಿನ ಭೌಗೋಳಿಕ ಅಂಶವೇ ಕಾರಣ.

ಇಲ್ಲಿ ಸಾಗರಿಕ ವಾಯುಗುಣವಿದೆ. ನದಿಗಳು - ಮುಖ್ಯವಾಗಿ ಥೇಮ್ಸ್ ಪೂರ್ವಕ್ಕೆ - ಜೌಸ್, ಟ್ರೆಂಟ್, ಟೀನ್, ಟ್ವೀಡ್, ಪಶ್ಚಿಮಕ್ಕೆ - ಸೆವರಿನ್ ಡೀ, ಮರ್ಸಿ, ಕ್ಲೈಡ್ ಇತ್ಯಾದಿ

**ಉದ್ಯೋಗಗಳು**- 1) ಕೈಗಾರಿಕೆ ಖನಿಜಸಂಪತ್ತು ಇರುವುದರಿಂದ ನಾನಾಕೈಗಾರಿಕೆಗಳು ನಡೆಯುತ್ತವೆ 2) ವ್ಯವಸಾಯ. ಶೇಕಡ ೦೨ರಷ್ಟು ಜನರು ಬೇಸಾಯಗಾರರು. ಗೋಧಿ, ಬಾರ್ಲಿ ಇತ್ಯಾದಿ ಬೆಳೆ ಬೆಳೆಸುತ್ತಾರೆ. ಈಗ ಯಾಂತ್ರಿಕ ಕೃಷಿಯಿಂದ ವ್ಯವಸಾಯೋತ್ಪನ್ನ ಹೆಚ್ಚಿದೆ. 3) ಪರ್ವತ ಪ್ರದೇಶಗಳಲ್ಲಿ ಕುರಿದನಗಳ ಸಾಕಣೆ 4) ಸಮುದ್ರ ತೀರದಲ್ಲಿ ಮೀನುಗಾರಿಕೆ. (ಪ್ರಸಿದ್ಧ) ಕೈಗಾರಿಕೆಗಳು:— ಮುಖ್ಯ ಐದು ವಿಧಗಳು 1) ಉಕ್ಕು - ಕಬ್ಬಿಣ, ವಾಹನಗಳ ತಯಾರಿಕೆ 2) ಹತ್ತಿ ಬಟ್ಟೆ ತಯಾರಿಕೆ 3) ಉಣ್ಣೆಬಟ್ಟೆ ತಯಾರಿಕೆ 4) ಹಡಗು ಕಟ್ಟುವಿಕೆ 5) ಇತರ ಕೈಗಾರಿಕೆಗಳು

**ಕೈಗಾರಿಕೆಗಳೂ ಪಟ್ಟಣಗಳೂ**:- 1) ಉಕ್ಕು ಕಬ್ಬಿಣ - ಯಂತ್ರಗಳು ಬರ್ಮಿಂಗ್‌ಹ್ಯಾಂ 2) ಸೈಕಲ್, ಮೋಟರ್ - ಕವೆಂಟ್ರಿ 3) ನಾರು -ಬಟ್ಟೆ ಬೆಲ್ಫಾಸ್ಟ್, 4) ಹತ್ತಿಬಟ್ಟೆ - ಲೆಂಕೆಶಾಯರ್, ಮ್ಯಾಂಚೆಸ್ಟರ್ 5) ಉಣ್ಣೆ ಬಟ್ಟೆ - ಯಾರ್ಕ್‌ಷೈರ್ ಪ್ರದೇಶದ ಲೀಡ್ಸ್, ಬ್ರಾಡ್‌ಫರ್ಡ್ 6) ಉಕ್ಕಿನ ಸಾಮಾನು - ಶೇಫೀಲ್ಡ್ 7) ಹಡಗು ಕಟ್ಟುವಿಕೆ - ಗ್ಲಾಸ್ಗೋ (ಮುಖ್ಯ) ಹಲ್, ಲಂಡನ್, ಬೆಲ್ಫಾಸ್ಟ್ ನ್ಯೂಕ್ಯಾಸಲ್

ಇತರ ಕೈಗಾರಿಗಳು: — ಮೀನುಗಾರಿಕೆ - ಲಂಡನ್. ಹಲ್, ಗ್ರೀಮ್ಸ್ ಬೀ, ಪಿಂಗಾಣಿ - ಸ್ಟೋಕ್‌ಎನ್‌ಟ್ರೆಂಟ್, ಚರ್ಮ, ಹೆಣಿಕೆಯ ಸಾಮಾನುಗಳು

**ಆಡಳಿತ**:— ಪ್ರಜಾತ್ತಾತ್ಮಕ; ಸರಕಾರದ ಅಧಿಪತಿ ರಾಜ ಅಥವಾ ರಾಣಿ (ಈಗ ಯಾರು?) ಆದರೂ ಸಾಂಕುಶಪ್ರಭುಗಳಾಗಿ ಪಾರ್ಲಿಮೆಂಟಿನ ಅಭಿಪ್ರಾಯಕ್ಕೆ ಒಪ್ಪಿರಬೇಕು. **ಈ ದೇಶಕ್ಕೂ ಭಾರತಕ್ಕೂ ಇರುವ ಸಂಬಂಧ**:- ಬ್ರಿಟಿಷರು ಭಾರತದ ಪಂಚವಾರ್ಷಿಕ ಯೋಜನೆಗಳಿಗೆ ತುಂಬಾ ಸಹಾಯ ನೀಡಿರುವರು. ಕಾರಣ ಭಾರತವು ಸ್ವತಂತ್ರವಾದ ಮೇಲೂ

ಕಾಮನ್‌ವೆಲ್ತ್ ರಾಷ್ಟ್ರಗಳಲ್ಲಿದ್ದು ಸಹಕಾರಸಂಪರ್ಕಗಳನ್ನು ಚೆನ್ನಾಗಿ ಬೆಳಸಿ ಕೊಂಡಿದೆ.

ಇ) I 1) ಗ್ರೇಟ್‌ಬ್ರಿಟನ್, ಉತರ್ತಐರ್ಲೆಂಡ್, ಮತ್ತು ಅವುಗಳ ಸುತ್ತಲೂ ಇರುವ ನೂರಾರು ದ್ವೀಪಗಳು ಸೇರಿವೆ.

2) ಬ್ರಿಟನ್, ಸ್ಕಾಟ್ಲೆಂಡ್, ವೇಲ್ಸ್ ಕೂಡಿದ ಎರಡು ದೊಡ್ಡ ದ್ವೀಪಗಳಿಗೆ ಗ್ರೇಟ್‌ಬ್ರಿಟನ್ ಎನ್ನುವರು. ಈ ಎರಡು ದೊಡ್ಡ ದ್ವೀಪಗಳೂ ಅವುಗಳ ಸುತ್ತಲೂ ಇರುವ ನೂರಾರು ಚಿಕ್ಕ ದ್ವೀಪಗಳು ಕೂಡಿ ಬ್ರಿಟಿಷ್ ದ್ವೀಪಗಳೆನಿಸುವುವು. ಯುನ್ಯಾಟೆಡ್‌ಕಿಂಗ್‌ಡಂನಲ್ಲಿ ಗ್ರೇಟ್ ಬ್ರಿಟನ್, ಉತ್ತರ ಐರ್ಲೆಂಡ್, ಮತ್ತು ನೂರಾರು ಚಿಕ್ಕದ್ವೀಪಗಳು ಸೇರಿವೆ.

3) ಈ ದೇಶ ಉತ್ತರ ಸಮಶೀತೋಷ್ಣವಲಯದಲ್ಲಿದೆ. ಸುತ್ತಲೂ ಸಮುದ್ರವಿರುವುದರಿಂದ ಈ ದೇಶದ ಯಾವ ಭಾಗವೂ ಸಮುದ್ರಕ್ಕಿಂತ 150 ಕಿ. ಮೀ. ಗಳಿಗೆ ದೂರವಿಲ್ಲ. ಕಲ್ಲಿದ್ದಲು ಗನಿಗಳುಳ್ಳ ಪೆನ್ನೈನ್ ಪರ್ವತವು ಇಂಗ್ಲಾಂಡಿನ ಪಶ್ಚಿಮ - ಉತ್ತರ ಭಾಗಗಳಲ್ಲಿ ಹಬ್ಬಿದೆ. ವೇಲ್ಸಿನಲ್ಲಿ ಪರ್ವತವೂ ಇಂಗ್ಲಾಂಡಿನ ಪೂರ್ವದಕ್ಷಿಣಗಳಲ್ಲಿ ಮೈದಾನಗಳೂ ಇವೆ. ಸ್ಕಾಟ್ಲೆಂಡ್ ನಲೋಲ್ಯಾಂಡ್ ಪ್ರದೇಶವು ಮಧ್ಯವಿದ್ದು ಇಲ್ಲಿ ಕ್ಲೈಡ್, ಥೇಮ್ಸ್ ನದಿಗಳು ಹರಿಯುತ್ತವೆ. ಇವುಗಳಿಂದ ಆಮದು ರಫ್ತುಗಳ ವ್ಯಾಪಾರ ನಡೆಯುವುದಕ್ಕೂ ಕೈಗಾರಿಕೆಗಳನ್ನು ಬೆಳಸುವುದಕ್ಕೂ ಅನುಕೂಲವಿದೆ.

4) ಸಾಗರವು ಈ ದೇಶದ ಸುತ್ತಲೂ ಆವರಿಸಿಕೊಂಡಿದೆ. ಹೀಗಾಗಿ ಹಿತಕರವಾದ ಸಾಗರಿಕ ವಾಯುಗುಣವು ಈ ದೇಶದಲ್ಲಿರುವುದು.

5) ಕಲ್ಲಿದ್ದಲುಗನಿಗಳು 1) ಸ್ಕಾಟ್ಲೆಂಡಿನಲ್ಲಿ - ಪೈಪ್‌ಷೈರ್, ನ್ಯಾನಾರ್ಕ್‌ಷೈರ್, ಐರ್‌ಷೈರ್, ಮಿಡಲೋಷ್ಯೆರ್ 2) ಇಂಗ್ಲಾಂಡಿನಲ್ಲಿ - ನಾರ್ಥಂಬರ್ಲೆಂಡ್, ಡರ್‌ಹಾಂ, ಯಾರ್ಕ್‌ಷೈರ್, ಸ್ಟಾಫರ್ಡ್‌ಷೈರ್ (ದಕ್ಷಿಣಕ್ಕೆ) ಲಿಸ್ಟರ್‌ಷೈರ್, ಸೌತ್‌ಸ್ಟಾಫರ್ಡ್‌ಷೈರ್, (ಪಶ್ಚಿಮಕ್ಕೆ) ಕಂಬರ್ಲೆಂಡ್, ಲ್ಯಾಂಕ್‌ಷೈರ್, ಸ್ಟಾಫರ್ಡ್‌ಷೈರ್ 3) ವೇಲ್ಸಿನಲ್ಲಿ ಕಾರ್ಡಿಫ್ ಪ್ರದೇಶದಗನಿಗಳು ಮುಖ್ಯವಾಗಿವೆ.

II 1) ಈ ಪಟ್ಟಣಕ್ಕೆ ಸಮೀಪ ಕಲ್ಲಿದ್ದಲುಗನಿಯಿದೆ. ಹತ್ತಿಕೈಗಾರಿಗೆ ಅಗತ್ಯವಾದ ತೇವವುಳ್ಳ ಗಾಳಿಯೂ ಬೀಸುತ್ತಿದೆ. ಕಚ್ಚಾಹತ್ತಿ ತರಿಸು ವುದಕ್ಕೂ ಸಿದ್ಧಬಟ್ಟೆಗಳನ್ನೂ ಕಳುಹಿಸುವುದಕ್ಕೂ ಲಿವರ್ಪೂಲ್ ಬಂದರು ಸಮೀಪದಲ್ಲೇ ಇರುವುದು. ಆದ್ದರಿಂದ ಮ್ಯಾಂಚೆಸ್ಟರ್ ಹತ್ತಿಬಟ್ಟೆಗೆ ಪ್ರಸಿದ್ಧ.

2) ಹತ್ತಿರದಲ್ಲಿಯೇ ಕಬ್ಬಿಣ ಕಲ್ಲಿದ್ದಲುಗನಿಗಳಿವೆ. ಸಾಣೆಕಲ್ಲುಗಳು ಪೆನ್ನೈನ ಪರ್ವತದಿಂದ ಸಾಕಷ್ಟು ದೊರಕುತ್ತವೆ. ಈ ಸ್ಥಳವು ಇಂಗ್ಲಾಂಡಿನ ಮಧ್ಯದಲ್ಲಿದ್ದು ಸಾರಿಗೆಸೌಕರ್ಯಗಳಿರುವುದರಿಂದ ಶೇಫೀಲ್ಡ್ ಕತ್ತಿ ಚೂರಿಗಳಿಗೆ ಹೆಸರು ಪಡೆದಿದೆ.

3) ಈ ದೇಶದ ಪಡುಗಡೆಯ ತೀರದಲ್ಲಿ ಉಷ್ಣೋದಕಪ್ರವಾಹವು ಹರಿಯುತ್ತಿರುವುದು, ಹೀಗಾಗಿ ನೈಋತ್ಯ ದಿಕ್ಕಿನಿಂದ ಬೀಸುವ ವಾಯುಗುಣವು ಬೆಚ್ಚನಾದಕಾರಣ ಅಲ್ಲಿನ ವಾಯುಗುಣವು ಹಿತಕರವಿದೆ.

4) ಉಕ್ಕು - ಕಬ್ಬಿಣ ಕೈಗಾರಿಕೆಗಳಲ್ಲಿ ಈ ದೇಶವು ಬಹಳ ಮುಂದಿದೆ. ಅಂತಹ ಕೈಗಾರಿಕೆಗಳಿಗೆ ಬೇಕಾದಷ್ಟು ಕಬ್ಬಿಣ ಇಲ್ಲಿ ಸಿಗುವುದಿಲ್ಲ. ಸಿಕ್ಕಿದ ಕಬ್ಬಿಣವೂ ಉತ್ತಮವಲ್ಲ. ಅದಕ್ಕಾಗಿ ಉತ್ತಮ ಕಬ್ಬಿಣವನ್ನು ಆಮದು ಮಾಡುತ್ತಾರೆ.

III ಬಿಟ್ಟಿರುವ ಮಾತುಗಳು 1) ಥೇಮ್ಸ್ 2) ಹ್ಯಾಲಿಫಾಕ್ಸ್ 3) ಹಡಗು 4) ಹೌಸ್ ಓಫ್ ಕಾಮನ್ಸ್ 5) ಬೆಲ್ಫಾಸ್ಟ್

ಉ) ಲಂಡನ್ ಪಟ್ಟಣದ ಸಂಕ್ಷಿಪ್ತ ಪರಿಚಯ:—

ಲಂಡನ್—ಈ ದೇಶದ ರಾಜಧಾನಿ. ಅತಿ ದೊಡ್ಡ ರೇವ್ ಪಟ್ಟಣ, ವ್ಯಾಪಾರ ಹಾಗೂ ಸಂಸ್ಕೃತಿಯ ಕೇಂದ್ರ. ಇಲ್ಲಿನ ಪ್ರೇಕ್ಷಣೀಯ ಸ್ಥಳಗಳ, ಬಕಿಂಗ್ಹಾಮ್ ಅರಮನೆ; ವೆಸ್ಟ್‌ಮಿನಿಸ್ಟರ್ ಚರ್ಚ್ ಸೆಂಟ್‌ಪಾಲ್ ದೇವಾಲಯ, ಪಾರ್ಲಿಮೆಂಟ್ ಹೌಸ್, ಗ್ರಿನಿಚಿನ ಅಬ್ಸರ್‌ವೇಟರಿ ಮೊದಲಾದುವು ಇಲ್ಲಿ ಜನಸಾಂದ್ರತೆ ಹೆಚ್ಚಿರುವುದರಿಂದ ಸುರಂಗಮಾರ್ಗವಿದೆ.

ಹೊಂದಿಸಿ ಬರೆಯಲಾಗಿದೆ. ಡರ್ಬಿ - ರೇಶ್ಮೆತಯಾರಿ, ವೇಲ್ಸ್ - ಕುರಿ ಸಾಕಣೆ. ನ್ಯಾಟಿಂಗ್‌ಹಾಂ - ಕಸೂತಿ ಕೆಲಸ, ಅಬರ್ಡಿನ್ - ಮೀನುಗಾರಿಕೆ, ಲ್ಯಾಂಕೆಷೈರ್ - ಹತ್ತಿಬಟ್ಟೆ, ಲೀಡ್ಸ್ - ಉಣ್ಣೆಬಟ್ಟೆಗೆ ಪ್ರಸಿದ್ಧ. ಬೋಲ್ಟನ್ - ದಾರ ತಯಾರಿಕೆ.

## 19 ಜಪಾನು ದೇಶ

ಅ) ನೂರು ವರ್ಷಗಳ ಹಿಂದೆ ಜಪಾನ್ ದೇಶವು ಬಹಳ ಹಿಂದುಳಿದಿತ್ತು. ಕ್ರಿ. ಶ. 1835ರಲ್ಲಿ ಅಮೆರಿಕಕ್ಕೆ ಹೋದ ನಾಯಕನು ತಿರುಗಿ ಬಂದ ಮೇಲೆ ಜಪಾನ್ ಸರಕಾರವು ಅನೇಕ ಅಭಿವೃದ್ಧಿ ಕಾರ್ಯಕ್ಕೆಳಿಯಿತು. ಈಗ ಆಸ್ಯಾ ಖಂಡದಲ್ಲೊಂದು ಮುಂದರಿದ ದೇಶವಾಗಿದೆ.

**ಲಕ್ಷಣಗಳು:—** ಹಲವು ದ್ವೀಪಗಳಿಂದ ಕೂಡಿದ ಈ ದೇಶದ ವಿಸ್ತೀರ್ಣ ಸು. 1·43 ಲಕ್ಷ ಚದರ ಮೈಲು. ಜನಸಂಖ್ಯೆ 10 ಕೋಟಿ. ವಾಯುಗುಣ ಸ್ವಲ್ಪ ಮಟ್ಟಿಗೆ ಹಿತಕರ. ಇಲ್ಲಿ ಗುಡ್ಡ ಬೆಟ್ಟಗಳೇ ಅಧಿಕ. ಮೈದಾನುಗಳು ವಿರಳ. ಟೋಕಿಯೋ ಸುತ್ತಲಿನ ಮೈದಾನವೇ ದೊಡ್ಡದು. ಅಗ್ನಿ ಪರ್ವತಗಳು ಬಹಳ ಇವೆ. ಸು. 3750 ಮೀಟರ್ ಎತ್ತರದ ಪೂಜಿಯಾಮಾ ಜಪಾನಿಯರ ಪವಿತ್ರ ಪರ್ವತವಾಗಿದೆ.

**ಖನಿಜಗಳು:-** 1) ಕಲ್ಲಿದ್ದಲು ಧಾರಾಳ ಇದೆ. 2) ಕಬ್ಬಿಣ ಹೆಚ್ಚಿಲ್ಲ. 3) ಎಣ್ಣೆ ಹಾನ್ಶ್ಯು ದ್ವೀಪದಲ್ಲಿ ಸಿಗುತ್ತದೆ. 4) ಉಳಿದುವು ಚಿನ್ನ, ಬೆಳ್ಳಿ ತಾಮ್ರ, ಸೀಸ, ಗಂಧಕ ಇತ್ಯಾದಿ. ದಟ್ಟವಾದ ಕಾಡುಗಳಲ್ಲಿ ಕಟ್ಟಿಗೆ ಬಿದಿರುಗಳು ಹೇರಳ ಇವೆ.

**ಕೈಗಾರಿಕೆಗಳು:—** 1) ಉಕ್ಕು, ಕಬ್ಬಿಣ, ಯಂತ್ರಗಳ ಕೈಗಾರಿಕೆ 2) ಹಡಗು ಕಟ್ಟುವಿಕೆ 3) ರೇಶ್ಮೆ, ಹತ್ತಿ, ಉಣ್ಣೆ ಬಟ್ಟೆಗಳ ತಯಾರಿಕೆ. 4) ಬೊಂಬೆ, ಬೆಂಕಿಕಡ್ಡಿ, ಕಾಗದ, ಫೇನ್ ಸ್ಟ್ಯಾನಿಸ್ಟರ್, ರಾಸಾಯನಿಕ ವಸ್ತುಗಳು, ವಿದ್ಯುತ್ತಿನ ಉಪಕರಣ ಇತ್ಯಾದಿಗಳ ತಯಾರಿಕೆ.

ಜಪಾನಿಯರು ಗೃಹ ಕೈಗಾರಿಕೆಗಳ ಮೂಲಕ ಬೃಹತ್ ಯಂತ್ರಕೈಗಾ

ರಿಕೆಯ ವಸ್ತುಗಳನ್ನು ತಯಾರಿಸುವುದರಲ್ಲಿ ಸಮರ್ಥರು.

**ಪಟ್ಟಣಗಳೂ ಕೈಗಾರಿಕೆಗಳೂ:—** 1) ಕೋಬಾ, ನಾಗಸಾಕಿ ಹಡಗು ಕಟ್ಟುವ ಕೇಂದ್ರಗಳು. 2) ಟೋಕಿಯೋ, ನಗೊಯಾ, ಒಸಾಕಾ— ಯಂತ್ರ ಕೈಗಾರಿಕೆ, ರಾಸಾಯನಿಕ ವಸ್ತುಗಳ ತಯಾರಿಕೆ, ಮತ್ತು ಕೃತಕ ರೇಶ್ಮೆ, ಉಣ್ಣೆ, ಹತ್ತಿ ಬಟ್ಟೆಗಳ ತಯಾರಿಕೆಗೆ ಪ್ರಸಿದ್ಧ 3) ಕಿಯೋಟೊ— ರೇಶ್ಮೆ, ವೆಲ್ವೆಟ್, ಅರಗಿನ ವಸ್ತುಗಳ ತಯಾರಿಕೆಗೆ ಹೆಸರು ಪಟ್ಟಿದೆ. 4) ಯೋಕೋಹಾಮ, ಕೋಬಾ—ಯಂತ್ರ ತಯಾರಿಕೆ ಮತ್ತು ರಾಸಾಯನಿಕ ವಸ್ತುಗಳು ತಯಾರಾಗುತ್ತವೆ.

**ಮುಖ್ಯ ಪಟ್ಟಣ-ಟೋಕಿಯೊ** ಜಪಾನಿನ ರಾಜಧಾನಿ. ಕೈಗಾರಿಕೆಗಳ ಕೇಂದ್ರ. ಜಗತ್ತಿನ ದೊಡ್ಡ ನಗರಗಳಲ್ಲೊಂದು. ಇಲ್ಲಿ ದೊಡ್ಡ ಗೋಪುರವೂ ಪಗೋಡಗಳೂ ಇವೆ.

**ಆಡಳಿತ —** ಪ್ರಜಾಸರಕಾರವಿದೆ. ರಾಜನು ಸಾಂಕುಶ ಪ್ರಭು. ಜಪಾನಿನಲ್ಲಿ ಹೌಸ್ ಓಫ್ ರೆಪ್ರೆಸೆಂಟಿಟೇವ್ಸ್ ಮತ್ತು ಹೌಸ್ ಓಫ್ ಕೌನ್ಸಿಲರ್ಸ್ ಎಂಬ ಎರಡು ಸಭೆಗಳಿಂದ ಕೂಡಿದ **ಡಯಟ್** ಎಂಬ ಪ್ರಜಾಪ್ರತಿನಿಧಿ ಸಭೆಯಿದೆ. ಈ ಸಭೆ ರೂಪಿಸಿದ ಆಡಳಿತವನ್ನು ಮಂತ್ರಿಮಂಡಲ ನಡೆಸುತ್ತಿದೆ. ಈ ದೇಶವು ನಮ್ಮ ರಾಷ್ಟ್ರಾಭಿವೃದ್ಧಿಗಾಗಿ 32 ಕೋಟಿ ರುಪಾಯಿ ಸಹಾಯ ಮಾಡಿದ್ದಲ್ಲದೆ ಅಲ್ಲಿನ ರೆಡ್‌ಕ್ರಾಸ್ ಸಂಸ್ಥೆಯು ಅಕ್ಕಿ ಮತ್ತು ಗೊಬ್ಬರವನ್ನೂ ಸಾವಿರಗಟ್ಟಲೆ ಟನ್ ಸಹಾಯ ಕೊಟ್ಟಿದೆ.

ಇ) I (1) ಹೊಕ್ಕೈಡೊ, ಹಾನ್ಶು, ಷಿಕೋಕ್ಕು ಮತ್ತು ಕ್ಯೂಷೆ ನಾಲ್ಕು ದ್ವೀಪಗಳು ಮುಖ್ಯವಾಗಿವೆ.

ಜಪಾನು ಆಸ್ಯಾ ಖಂಡದ ಮುಖ್ಯ ಭಾಗದಿಂದ ಬೇರ್ಪಟ್ಟು ಅವುಗಳ ಮಧ್ಯ ಸಮುದ್ರವಿದೆ. ಹಾಗೆ ಬ್ರಿಟನ್ ಯುರೋಪ್ ಖಂಡದಿಂದ ಬೇರ್ಪಟ್ಟಿದೆ. ಬ್ರಿಟನ್ನಿನಂತೆ ಜಪಾನ್ ಕೂಡಾ ಸಮಶೀತೋಷ್ಣವಲಯದಲ್ಲಿದ್ದು ಬ್ರಿಟಿಷ್ ದ್ವೀಪಗಳ ಸನ್ನಿವೇಶವು ಹೇಗೆ ಮುಖ್ಯವಾಗಿದೆಯೋ ಹಾಗೆ ಜಪಾನಿನ ಸನ್ನಿವೇಶವೂ ಮುಖ್ಯವಾಗಿದೆ. ಅದು ಕಾರಣ ಪೌರ್ವಾತ್ಯ ಬ್ರಿಟನ್

ಎಂದು ಕರೆಯುತ್ತಾರೆ.

3) ಜಪಾನಿನಲ್ಲಿ ವ್ಯವಸಾಯೋಚಿತವಾದ ಭೂಮಿ ಸ್ವಲ್ಪವೇ ಇದೆ. ಇದ್ದುದೂ ಸಮತಲವಲ್ಲ. ಇದರಿಂದ ಕಷ್ಟಸಹಿಷ್ಣುಗಳಾದ ರೈತರು ಶ್ರದ್ಧೆಯಿಟ್ಟು ಎರಡೆರಡು ಬೆಳೆ ಬೆಳೆಸುತ್ತಾರೆ. ಒಂದು ಸಾರಿ ಎರಡು ಮೂರು ಮಿಶ್ರಬೆಳೆಗಳನ್ನೂ ತೆಗೆಯುವುದುಂಟು - ಕಾರಣ - ಯಂತ್ರೋಪಯೋಗವಿಲ್ಲದೆಯೇ ಕೃಷಿಮಾಡಬಲ್ಲರು. ಕೆಲವೆಡೆ ಮನೆಗಳ ಮೇಲ್ ಛಾವಣಿಯ ಮೇಲೂ ಬೆಳೆ ಬೆಳೆಸುವುದುಂಟು. ಈ ದೇಶದಲ್ಲಿ ಎಕ್ರೆಗೆ ಸರಾಸರಿ 2500 ಫೌಂಡ್‌ಗಳಷ್ಟು ಭತ್ತ ಬೆಳೆಯುತ್ತದೆ

II ಬಿಟ್ಟಿರುವ ಮಾತುಗಳು 1) 44 2) ಹಾನ್ಶು ದ್ವೀಪದ ವಾಯವ್ಯ 3) ಕಿಯಾಟೋ 4) ಈಫೆಲ್

**ಉ) ಜಪಾನಿನ ಬೆಳೆಗಳು:—** ಭತ್ತ (ಮುಖ್ಯ) ಗೋಧಿ, ಬಾರ್ಲಿ ಆಲೂಗಡ್ಡೆ, ಸೋಯಾಬೀನ್ಸ್, ಹಸುರು ಟೀ, ಕಬ್ಬು, ಹಿಪ್ಪುನೇರಳೆ ಮುಂತಾದುವು

2) ಜಪಾನಿಯರು ಮನೆ ಕಟ್ಟುವುದಕ್ಕೆ — — ಗಳನ್ನುಪಯೋಸುತ್ತಾರೆ. (ಕಟ್ಟಿಗೆ, ಬಿದಿರು) 2) ಜಪಾನಿಯರು ಮನೆಯ ಮುಂದೆ ವಿವಿಧವಾದ — — ವನ್ನು ಬೆಳೆಸುವರು (ಹೂಗಳಿಂದ ಕೂಡಿದ ಕೈತೋಟ 3) ಜಪಾನಿಯರು - ಯಲ್ಲಿ ನಿಪುಣರು (ಗೃಹಕೈಗಾರಿಕೆ) 4) ಮನೆಗಳಲ್ಲಿ — ಗಳನ್ನು ಬಳಸುವುದಿಲ್ಲ (ಪಾದರಕ್ಷೆ)

3) **ಜಪಾನಿಯರ ನಡೆನುಡಿಗಳು:-** ಇವರು ಬೌದ್ಧಧರ್ಮದವರು, ಮಖ್ಯಮಂಗೋಲಿಯನ್ ಬುಡಕಟ್ಟಿನವರು. ಕುಶಲ ಕೆಲಸಗಾರರು, ಛಲವಾದಿಗಳು, ದೇಶಾಭಿವೃದ್ಧಿಗಾಗಿ ಕಷ್ಟಪಟ್ಟು ದುಡಿಯುತ್ತಾರೆ. ಅತಿಥಿಗಳಿಗೆ ಟೀ ಕೊಡುವ ಪದ್ಧತಿಯು ಸಂಪ್ರದಾಯ ಬದ್ಧವಿದೆ. ಹೆಂಗಸರು ಬಹಳ ಅಲಂಕಾರಪ್ರಿಯರು. ಕಿಮಾನೊ ಎಂಬ ಉಡುಪು ತೊಡುವರು. ಇವರ ಹಬ್ಬಗಳು - ಹೊಸವರ್ಷದ ಹಬ್ಬ, (ಮುಖ್ಯ) ಬೊಂಬೆಹಬ್ಬ. ದೀಪದಹಬ್ಬ ಮತ್ತು ವಸಂತಋತುವಿನ ಹಬ್ಬ

## ೩೦ ರಷ್ಯಾದೇಶ

ಅ) ರಷ್ಯಾದೇಶದಲ್ಲಿ 1917ರಲ್ಲಿ ನಡೆದ ರಾಜಕೀಯ ಕ್ರಾಂತಿಯಿಂದಾಗಿ ರಾಜಮನೆತನವಳಿದು ಕಮ್ಯುನಿಸ್ಟ್ ಸರಕಾರ ಸ್ಥಾಪಿತವಾಗಿದೆ. ಆಗ ಅಲ್ಲಿನ ಸ್ಥಿತಿ ಕೆಟ್ಟುಹೋಗಿತ್ತು. ಆದ್ದರಿಂದ ಲೆನಿನ್ ಮತ್ತು ಸ್ಟಾಲಿನ್‌ರ ಪ್ರಯತ್ನದ ಫಲವಾಗಿ 1928ರಿಂದ 1950ರ ವರೆಗೆ ನಡೆದ ಪಂಚವಾರ್ಷಿಕ ಯೋಜನೆಗಳಿಂದಾಗಿ ವ್ಯವಸಾಯ, ಕೈಗಾರಿಕೆ, ಗನಿಗಾರಿಕೆಗಳು ಬಹಳ ಮುಂದುವರಿದವು. 1950ರಿಂದಂತೂ ಎಲ್ಲಾ ಕ್ಷೇತ್ರಗಳಲ್ಲಿಯೂ ಪ್ರಗತಿಹೊಂದಿ ಅಂತರಿಕ್ಷ

ಯಾನದಲ್ಲಿಯೂ ಪ್ರಸಿದ್ಧ ಪಡೆಯಲು ಸಾಧಿಸುತ್ತಿದೆ

**ಸನ್ನಿವೇಶ ವಾಯುಗುಣ:—** ರಷ್ಯಾ ವಿಶಾಲವಾದ ದೇಶ, ಯುರೋಪಿನ ಪೂರ್ವಭಾಗ, ಆಸ್ಯಾದಪೂರ್ವ ಮತ್ತು ಉತ್ತರಭಾಗವನ್ನೆಲ್ಲ ಆವರಿಸಿದೆ. ವಿಸ್ತೀರ್ಣ ಸುಮಾರು 220 ಲಕ್ಷ ಚದರ ಕಿ. ಮೀಟರ್ ಜನಸಂಖ್ಯೆ 22 ಕೋಟಿ. ಹೆಚ್ಚಿನವರು ಸ್ಲಾವ್ ಜನರು. ಈ ದೇಶವು ಉತ್ತರ ಸಮಶೀತೋಷ್ಣ ಮತ್ತು ಶೀತವಲಯದಲ್ಲಿ ಹಬ್ಬಿರುವುದರಿಂದ ಚಳಿ ಹೆಚ್ಚು, ಕೆಲ ಭಾಗಗಳಲ್ಲಿ ಮಂಜು ತುಂಬಿರುತ್ತದೆ

**ಖನಿಜಗಳು** 1) **ಕಲ್ಲಿದ್ದಲು** - ಮತ್ತು ಕಬ್ಬಿಣ-ಡೊನೆಟ್ಸ್ ಪ್ರದೇಶ ಉರಾಲ್ ಪರ್ವತ ಪ್ರದೇಶ, ಬೈಕಲ್ ಸರೋವರ ಮತ್ತು ವ್ಲಾಡಿವೊಸ್ಟೋಕ್ ಪ್ರದೇಶಗಳಲ್ಲಿವೆ. 2) **ಪೆಟ್ರೋಲಿಯಂ - ಉರಾಲ್** ಮತ್ತು ಕಾಕಸಸ್ ಪ್ರದೇಶಗಳಲ್ಲಿ ಸಿಗುತ್ತದೆ. 3) ಇತರ ಖನಿಜಗಳು - ಚಿನ್ನ, ಬೆಳ್ಳಿ, ಇತ್ಯಾದಿ. ಕೈಗಾರಿಕೆಯ ಪ್ರದೇಶಗಳು - ಡೊನೆಟ್ಸ್ ಪ್ರದೇಶ, · ಕುಜ್ ನೆಟ್ಸ್ ಕ್ಷೇತ್ರ, ಮಾಸ್ಕೋವಲಯ ಮುಖ್ಯ

| ನಗರಗಳು | ಕೈಗಾರಿಕೆಗಳು |
|---|---|
| ಗಾರ್ಕಿ, ಕಾಲನಿನ್ | ವಾಹನ, ಯಂತ್ರೋಪಕರಣಗಳು |
| ಲೆನಿನ್ ಗ್ರಾಡ್ — | ಹಡಗು, ಯಂತ್ರಗಳ ತಯಾರಿ. |
| ತಾಸ್ಕೆಂಟ್ — | ಹತ್ತಿ- ಉಣ್ಣೆಬಟ್ಟೆ, ಸಿಗರೇಟ್ |

ಕೀವ್, ಖಾರಕೋವ್
ಸ್ಟಾಲಿನ್ ಗಾಡ್ ರೊಸ್ಟೋವ್ } ವ್ಯಾವಸಾಯಿಕ ಯಂತ್ರಗಳು

ಬರ್ನಾಲ್, ಸ್ಟಾಲಿನಸ್ಕ
ನೋವೊಸೈಬಿರ್ಸ್ಕ } ಯಂತ್ರೋಪಕರಣಗಳ ತಯಾರಿಕೆ

ಯರಸ್ಲಾವ್, ಐವನೋವ್ — ವಿಮಾನ, ರೈಲ್ವೆಯಂತ್ರಗಳು
ಬಟ್ಟೆಗಳು, ರಾಸಾಯನಿಕ ವಸ್ತುಗಳು.

**ಸಂಚಾರ ಸಂಪರ್ಕಗಳು:—** 1) ಮಾಸ್ಕೊದಿಂದ ವ್ಲೋಡಿ ವೋಸ್ಟೋಕ್ ವರೆಗೆ ಟ್ರಾನ್ಸ್ ಸೈಬೀರಿಯನ್ ರೈಲ್ವೆ ಮಾರ್ಗ, ಮಾಸ್ಕೊ ನಗರಕ್ಕೆ ಸಂಬಂಧಿಸಿದ ರೈಲ್ವೆ ಮಾರ್ಗಗಳು. 2) ವೋಲ್ಗಾ ಮತ್ತು ಡಾನ್ ನದಿಗಳನ್ನು ಸೇರಿಸುವ ಕಾಲುವೆ. ಕ್ಯಾಸ್ಪಿಯನ್ ಮತ್ತು ಅಜೋವ್ ಸಮುದ್ರಗಳನ್ನು ಸೇರಿಸುವ ಕಾಲುವೆ ಮುಖ್ಯವಾದುವು. ವ್ಯಾಪಾರ — ಪೋಲೆಂಡ್, ರುಮೇನಿಯಾ, ಜೆಕೋಸ್ಲೊವೇಕಿಯಾ, ಹಂಗೇರಿ ಬಲ್ಗೇರಿಯಾ ದೇಶಗಳೊಡನೆ ಮತ್ತು ಇಂಡಿಯಾ ದೇಶಗಳೊಡನೆ ಹೆಚ್ಚಾದ ಸಂಪರ್ಕ ಬೆಳೆಸಿದೆ.

**ಆಡಳಿತ:—** ಕಮ್ಯುನಿಸ್ಟ್ ಪಕ್ಷ ನಡೆಸುತ್ತಿದೆ. ಆಡಳಿತದ ನಿರ್ವಹಣೆಗೆ ಸುಪ್ರೀಂ ಸೋವಿಯಟ್ ಸಭೆಯಿದೆ. ಸಂಪೂರ್ಣಾಧಿಕಾರ ಪ್ರೆಸಿಡಿಯಂ ಎಂಬ ಸಮಿತಿಯ ವಶವಿದೆ. ಮಂತ್ರಿಮಂಡಲದಲ್ಲಿ ಪ್ರಧಾನಿ ಮತ್ತು ಇತರ ಮಂತ್ರಿಗಳೂ ಇರುವರು.

**ಮಾಸ್ಕೊ ನಗರ:—** ಈ ದೇಶದ ರಾಜಧಾನಿ, ಕೈಗಾರಿಕೆಗಳ ಕೇಂದ್ರ ಇಲ್ಲಿ ವಿಶ್ವವಿದ್ಯಾಲಯ, ರೆಡ್‌ಸ್ಕ್ವೇರ್, ಲೆನಿನ್ ಸಮಾಧಿ, ಸೆಂಟ್ ಬಾಸಿಲ್ ಚರ್ಚ್, ಪುಸ್ತಕ ಭಂಡಾರ ಮೊದಲಾದುವು ಇವೆ.

**ಇ)** I (1) ಕೈಗಾರಿಕೆಗೆ ಅಗತ್ಯವಾದ ಕಬ್ಬಿಣ, ಕಲ್ಲಿದ್ದಲು; ಪೆಟ್ರೋಲಿಯಂ ಎಣ್ಣೆ ಮೊದಲಾದ ಖನಿಜಗಳು ಧಾರಾಳ ಇವೆ. ಮತ್ತು ನಾಲ್ಕೈದು ಪಂಚವಾರ್ಷಿಕ ಯೋಜನೆಗಳ ಫಲವಾಗಿ ರಷ್ಯಾದೇಶ ಬಹಳ ಮುಂದುವರಿಯಿತು.

2) ಕ್ಯಾಸ್ಪಿಯನ್ ಸಮುದ್ರ ಸೇರುವ ಓಲ್ಗಾ ನದಿ ಎಲ್ಲಕ್ಕೂ ಮುಖ್ಯ ಇನ್ನು ನೀಪರ್, ಡಾನ್, ಡ್ನೈನಾ, ಓಬಿ, ಎನಿಸಿ, ಲೀನಾ ಇವೆಲ್ಲಾ ರಷ್ಯಾ ದೇಶದ ಮುಖ್ಯ ನದಿಗಳು.

3) ಕಲ್ಲಿದ್ದಲು, ಕಬ್ಬಿಣ, ಪೆಟ್ರೋಲಿಯಂ (ಇವು ಮುಖ್ಯ) ಇನ್ನು ಚಿನ್ನ. ಬೆಳ್ಳಿ, ಸತುವು, ತಾಮ್ರ, ಮ್ಯಾಂಗನೀಸ್, ಎಲ್ಯುಮಿನಿಯಂ ಮುಖ್ಯ ವಾಗಿ ದೊರೆಯುತ್ತವೆ

II ಬಿಟ್ಟ ಶಬ್ದಗಳು. 1) ಕಾಕಸಸ್, ಸಖಲಿನ್ 2) ಮಾಸ್ಕೊ 3) ಅಜೋವ್ 4) ಹಡಗು ಕಟ್ಟುವುದು 5) ಯುಕ್ರೈನ್.

III (ಅ) ಕಾರ್ಲ್ ಮಾರ್ಕ್ಸನು (ಜರ್ಮನಿ) ಕ್ಯಾಪಿಟಲ್ ಎಂಬ ಗ್ರಂಥ ದ್ವಾರಾ ಜನಸಾಮಾನ್ಯರ ಸೌಖ್ಯವೇ ಸರಕಾರದ ಮುಖ್ಯ ಧ್ಯೇಯವೆಂದು ವಿವರಿಸುತ್ತಾ ಹೀಗೆ ಹೇಳುತ್ತಾನೆ. ಜನರು ಬಡತನದಲ್ಲಿ ಮುಳುಗಿರುವಾಗ ಯಂತ್ರಗಳ ಮಾಲಿಕರಾದ ಭಂಡವಾಳಗಾರರು ಮಾತ್ರ ಧನಿಕರಾಗುವುದು ಅನ್ಯಾಯ. ಕೈಗಾರಿಕೆಯ ಲಾಭವು ಕೂಲಿಗಾರರಿಗೆ ಸೇರತಕ್ಕದ್ದು. ಲೋಕದಲ್ಲಿ ಕಷ್ಟಪಟ್ಟು ಕೈಕೆಲಸ ಮಾಡುವ ಜನರೆಲ್ಲರೂ ಒಟ್ಟಾಗಿ ಸಾಹುಕಾರರನ್ನು ಮೂಲೆಗೆ ತಳ್ಳಿ ಅವರ ಕೈಗೆ ಸಿಗದಂತೆ ಭೂಮಿಯ ಉತ್ಪನ್ನವನ್ನೂ, ಯಂತ್ರಗಳನ್ನೂ ಧನವನ್ನೂ ತಮ್ಮ ವಶ ಮಾಡಿಕೊಂಡು ಸುಖಿಗಳಾಗಬೇಕು. ಹೀಗೆ ಆರ್ಥಿಕ ವ್ಯವಸ್ಥೆಯನ್ನು ಸರಿಪಡಿಸುವಲ್ಲಿ ಶಕ್ತಿಪ್ರಯೋಗ (ಹಿಂಸಾತ್ಮಕವಾದರೂ) ಮಾಡುವುದು ಅನ್ಯಾಯವಲ್ಲ. ಸಾಮ್ಯವಾದದಲ್ಲಿ ರಾಷ್ಟ್ರದ ಸಂಪತ್ತೆಲ್ಲ ಸರಕಾರಕ್ಕೆ, ಖಾಸಗಿ ಆಸ್ತಿಗೆ ಎಡೆಯಿಲ್ಲ. ಭಂಡವಾಳ ಶಾಯಿಯನ್ನು ತೊಡೆದು ವರ್ಗರ ಹಿತಸಮಾಜ ಕಟ್ಟುವುದೇ ಸಾಮ್ಯವಾದದ ಉದ್ದೇಶ.

ಆ) ಕಮ್ಯುನಿಸ್ಟ್ ತತ್ವದ ಪ್ರಕಾರ ಆ ದೇಶದ ಭೂಮಿ, ಅರಣ್ಯ, ಕಾರ್ಖಾನೆ, ರಸ್ತೆ. ರೈಲ್ವೆ ಇತ್ಯಾದಿ ಸರಕಾರದ ಸಂಪತ್ತು. ಕಮ್ಯುನಿಸ್ಟ್ ಪಕ್ಷವೇ ರಾಜಕೀಯ ಪಕ್ಷವಾಗಿ ಆಡಳಿತ ನಡೆಸುತ್ತದೆ. ಬೇರೆ ಪಕ್ಷಗಳಿಗೆ ಎಡೆಯಿಲ್ಲ.

ರಷ್ಯಾದ ರಾಜ್ಯಘಟನೆ 5-12-1935ರಲ್ಲಿ ಅಂಗೀಕೃತವಾಗಿ ಸುಪ್ರಿಂ ಸೋವಿಯತ್ ಎಂಬ ಪ್ರಜಾಪ್ರತಿನಿಧಿ ಸಭೆಯು ಆಡಳಿತ ನಡೆಸುವುದು. ಇಲ್ಲಿ ನಾಲ್ಕು ವರ್ಷಗಳಿಗೊಮ್ಮೆ ಚುನಾವಣೆ ನಡೆದು ವರ್ಷದಲ್ಲಿ ಎರಡು ಸಾರಿ ಸಭೆ ಸೇರುವುದು. ನ್ಯಾಯಾಂಗಕ್ಕಾಗಿ ಐದು ವರ್ಷಗಳಿಗೊಮ್ಮೆ ನೇಮಿಸಲ್ಪಡುವ ನ್ಯಾಯಾಧೀಶರಿದ್ದಾರೆ. ಕಾರ್ಯನಿರ್ವಹಣೆಗೆ ಮಂತ್ರಿಮಂಡಲವಿದ್ದು ಅದರಲ್ಲಿ ಪ್ರಧಾನಿಗಳೂ ಇತರ ಮಂತ್ರಿಗಳೂ ಇರುವರು.

ಇ) ರಷ್ಯಾದೇಶವು ರಾಕೆಟ್ ಪ್ರಯೋಗವನ್ನು (4-10-1947- ಸ್ಪುಟ್ನಿಕ್) ಆರಂಭಿಸಿದೆ. ಎರಡನೆ ಸ್ಪುಟ್ನಿಕ್‌ನ್ನು ಲೈಕಾನಾಯಿಯೊಡನೆ ಹಾರಿಸಲಾಗಿತ್ತು. 1959ರಲ್ಲಿ (ಲುನಿಕ್) 3 ರಾಕೇಟುಗಳನ್ನು ಹಾರಿಸಿದಾಗ ಒಂದು ಚಂದ್ರನನ್ನು ದಾಟಿತ್ತು. ಮತ್ತೊಂದು ಚಂದ್ರನಲ್ಲಿಳಿದಿತ್ತು. ಮೂರನೆ ಲುನಿಕ್ ಚಂದ್ರನ ಹಿಂಬಾಗದ ಪೊಟೋಗಳನ್ನು ಕಳುಹಿತ್ತು. 1961ರಲ್ಲಿ ಗ್ಯಾಗರಿನ್‌ರು ರಾಕೇಟ್‌ದೊಡನೆ ಭೂಪ್ರದಕ್ಷಿಣೆ ಮಾಡಿಬಂದಿದ್ದರು. ಈಗ ರಷ್ಯಾಶುಕ್ರಗ್ರಹದ ಶೋಧದಲ್ಲಿದೆ. ಅಮೇರಿಕಾ ಅಫೇಲೋದಿಂದ ಚಂದ್ರನಲ್ಲಿ ಳಿದಕಾರಣ ರಷ್ಯಾಶುಕ್ರ ಮೊದಲಾದ ಗ್ರಹಗಳಲ್ಲಿಯುವ ಪ್ರಯತ್ನ ನಡೆಸುತ್ತಿದೆ.

ಉ) 1 – ರಷಾದ್ಯ **ಉದ್ಯೋಗಗಳು** 1) **ಕೈಗಾರಿಕೆ** 2) **ವ್ಯವಸಾಯ.** ಕ್ಷೇತ್ರಗಳು ವಿಶಾಲವಿರುವುದರಿಂದ ಯಾಂತ್ರಿಕ ಕೃಷಿ ನಡೆಯುತ್ತಿದೆ. ಗೋಧಿ, ಜೋಳ ಹೆಚ್ಚಾಗಿ ಬೆಳೆಯುತ್ತವೆ. 3) ಸಮುದ್ರ ತೀರದಲ್ಲಿ **ಮೀನುಗಾರಿಕೆ** – ಮೀನುಗಳನ್ನು ಹಿಡಿದು ಶುದ್ಧೀಕರಿಸಿ ಡಬ್ಬಿಗಳಲ್ಲಿ ರಫ್ತು ಮಾಡುವುದು. 4) ಉತ್ತರ ಭಾಗದಲ್ಲಿ **ಮರಕಡಿಯುವುದು** 5) **ಬೇಟೆ** – ಸೈಬೇರಿಯದಲ್ಲಿ ಪ್ರಾಣಿಗಳ ತುಪ್ಪಟ–ಚರ್ಮಗಳ ಶೇಖರಣೆ ಮತ್ತು ವ್ಯಾಪಾರ

2) ರಷ್ಯಾದಿಂದ ಭಾರತಕ್ಕಾದ ಸಹಾಯಗಳು:—

ಭಿಲ್ಲಾ ಉಕ್ಕು - ಕಬ್ಬಿಣ ಕಾರ್ಖಾನೆ, ನೈವೇಲಿಯ ಉಷ್ಣವಿದ್ಯುತ್ ಕೇಂದ್ರ. ಬರೌನಿ ಮತ್ತು ಕೊಯಿಲಿಯಾ ಎಣ್ಣೆ ಶುದ್ಧೀಕರಣಕೇಂದ್ರ, ರಾಂಚಿಯ ಬೃಹತ್‌ಯಂತ್ರಕಾರ್ಯಗಾರ, ಮದ್ರಾಸ್ ಸರ್ಜಿಕಲ್ ಇನ್‌ಸ್ಟು

ಮೆಟ್ ಪ್ಲ್ಯಾಂಟ್, ಕಥಾರದ ಕಲ್ಲಿದ್ದಲು ಶುದ್ಧೀಕರಣ ಕೇಂದ್ರ, ಬೊಂಬ್ಯಾ ಇಂಡಿಯನ್ ಇನ್‌ಸ್ಟಿಟ್ಯೂಟ್ ಓಫ್ ಟೆಕ್ನಾಲಿಜಿ ಇತ್ಯಾದಿ (ಸ್ಥಾಪನೆ)ಗಳಿಗೆ ನೆರವಿತ್ತಿದೆ. ಇನ್ನು ಹಲವು ಸ್ಥಾವರಗಳಿಗೆ ನೆರವೀಯಲು ಮುಂದೆಬಂದಿದೆ.

## 21 ಅಮೇರಿಕ ಸಂಯುಕ್ತ ಸಂಸ್ಥಾನಗಳು

ಅ) ಚರಿತ್ರೆ ಈ ಸಂಸ್ಥಾನಗಳು ನಾಲ್ಕು ಶತಮಾನಗಳಿಂದೀಚೆಗೆ ವಿಜ್ಞಾನ, ಕೈಗಾರಿಕೆ, ವ್ಯವಸಾಯ, ಶಿಕ್ಷಣಾದಿಗಳಲ್ಲಿ ಸಂಪದ್ಭರಿತ ದೇಶ ವೆನಿಸಿದೆ. ಇಲ್ಲಿನವರು ಸ್ವಾತಂತ್ರ್ಯಪ್ರಿಯರು. ಪ್ರಜಾಸತ್ತೆಯಲ್ಲಿ ನಂಬಿಕೆ ಯುಳ್ಳವರು. ಹೊಸ ಹೊಸಶೋಧಗಳನ್ನು ನಡೆಸಿ ಪ್ರದರ್ಶಿಸುವರು.

**ಸನ್ನಿವೇಶಲಕ್ಷಣಗಳು:-** ಈರಾಷ್ಟ್ರದಲ್ಲಿ 49 ರಾಜ್ಯಗಳೂ 2200 ಮೈಲು ದೂರದ ಹವಾಯಿ ದ್ವೀಪಗಳೂ ಸೇರಿವೆ. ಪೂರ್ವ-ಪಶ್ಚಿಮಗಳಲ್ಲಿ ಅಟ್ಲಾಂಟಿಕ್ ಮತ್ತು ಫೆಸಫಿಕ್ ಸಾಗರಗಳಿವೆ. ವಿಸ್ತೀರ್ಣ 92 ಲಕ್ಷ ಚದರಮೈಲು. ಜನಸಂಖ್ಯೆ 18 ಕೋಟಿ. ಇದರ ಉತ್ತರಕ್ಕೆ ಪಂಚಸರೋವರಗಳೂ ಪೂರ್ವ-ಪಶ್ಚಿಮಗಳಲ್ಲಿ ಪರ್ವತಗಳೂ ಮಧ್ಯೆ ಅನೇಕ ಪ್ರಸ್ಥಭೂಮಿಗಳೂ ಇವೆ.

**ವಾಯುಗುಣ** – ಈ ದೇಶ (ಅಲಾಸ್ಕಬಿಟ್ಟು) ಸಮಶೀತೋಷ್ಣ ವಲಯದಲ್ಲಿದೆ. ಪಶ್ಚಿಮತೀರ ಸಾಮಾನ್ಯ ಬೆಚ್ಚಗೆ. ಆದರೆ ಶೀತೋದಕ ಪ್ರವಾಹ ಹರಿಯುವುದರಿಂದ ಚಳಿಗಾಲದಲ್ಲಿ ಚಳಿ ಹೆಚ್ಚು, ಬೇಸಗೆಯಲ್ಲಿ ಉಷ್ಣೋದಕ ಹರಿಯುವುದರಿಂದ ಹಿತಕರವಾದ ವಾಯುಗುಣವಿದೆ. ಮಧ್ಯ ಭಾಗದಲ್ಲಿ ವಿಪರೀತ ಚಳಿಯಿದ್ದರೆ ಬೇಸಗೆಯಲ್ಲಿ ಸಾಮಾನ್ಯ ತಾಪವಿದ್ದು ಮಳೆಬರುತ್ತಿದೆ.

**ವ್ಯವಸಾಯಕ್ರಮ:-** ಯಂತ್ರಗಳ ಮೂಲಕ ಆಧುನಿಕ ರೀತಿಯ ಕೃಷಿ ನಡೆಯುತ್ತಿದೆ. ಶೇಕಡ 8ರಷ್ಟು ಜನರು ಬೇಕಾದುದಕ್ಕಿಂತ ಹೆಚ್ಚು ಧಾನ್ಯ ಬೆಳೆಸುತ್ತಾರೆ. ನೀರಾವರಿಗಾಗಿ ಅನೇಕ ಅಣೆಕಟ್ಟುಗಳೂ ಕಾಲುವೆಗಳೂ ಆಗಿವೆ ಬೆಳೆಗಳು-ಗೊಧಿ (ಮೈದಾನಗಳಲ್ಲಿ) ಮೆಕ್ಕೆಜೋಳ (ತುಗ್ಗುಜಾಗದಲ್ಲಿ)

ಹತ್ತಿ, ಹೊಗೆಸೊಪ್ಪು, ಹಣ್ಣುಗಳು ಇತ್ಯಾದಿ - ವಿಶಾಲ ಸ್ಥಳಗಳಲ್ಲಿ ಹಂದಿ ಕುರಿ, ದನಗಳ ಸಾಕಣೆ.

**ಖನಿಜಸಂಪತ್ತು**:— ಸಮೃದ್ಧ ಇದೆ. 1) ಕಬ್ಬಿಣ - ಕಲ್ಲಿದ್ದಲು- ಅಪಲೇಚಿಯನ್ ಪರ್ವತದಲ್ಲಿ 2) ತಾಮ್ರ, ಕಲ್ಲಿದ್ದಲು-ರಾಕಿಪರ್ವತಗಳಲ್ಲಿ 3) ಪೆಟ್ರೋಲಿಯಂ-ಟೆಕ್ಸಾಸ್, ಓಕ್ಲಹಾಂ, ಆರಕಾನಾ, ಲೂಸಿಯಾನ ಗಳಲ್ಲಿ ಸಿಗುತ್ತವೆ. 4) ಇತರ ಲೋಹಗಳು ಚಿನ್ನ, ಬೆಳ್ಳಿ, ಸತುವು ಇತ್ಯಾದಿ

| **ಕೈಗಾರಿಕೆಗಳೂ** | **ನಗರಗಳೂ** |
|---|---|
| ಕಾರುಗಳು | ಮಿಲ್ವಾಕಿ, ಡೆಟ್ರಾಯಿಟ್, ಕ್ಲೀವ್‌ಲ್ಯಾಂಡ್ |
| ಉಣ್ಣೆಬಟ್ಟೆ | ಫಿಲಡೆಲ್ಫಿಯಾ, ಬಾಸ್ಟನ್, ನ್ಯೂಜರ್ಸಿ |
| ಮಾಂಸ ತಯಾರಿ | ಷಿಕಾಗೊ, ಬಫಲೋ |
| ಚಲನಚಿತ್ರ | ಹಾಲಿವುಡ್ (ಲಾಸ್‌ಎಂಜಲೀಸ್) |
| ಹಣ್ಣುಗಳು | ಸ್ಯಾನ್‌ಫ್ರಾನ್ಸಿಸ್ಕೊ |
| ಉಕ್ಕು ಕಬ್ಬಿಣ | ಫಿಟ್ಸ್‌ಬರ್ಗ (ಜಗತ್ಪ್ರಸಿದ್ಧ) |
| ಹತ್ತಿಬಟ್ಟೆ | ಫಾಲ್‌ರಿವರ್, ನ್ಯೂಯಾರ್ಕ್, ಮ್ಯಾಂಚೆಸ್ಟರ್ ಪ್ರಾವಿಡೆನ್ಸ್ |
| ಎಣ್ಣೆಶುದ್ಧೀಕರಣ | ಸ್ಯಾನ್‌ಅಂಟಾನಿಯಾ, ಹೌಸ್‌ಟನ್ |

ಬೆಣ್ಣೆ, ಗಿಣ್ಣು, ಮಾಂಸ, ಹಿಟ್ಟುತಯಾರಿ-ಕಾನ್ಸಾಸ್, ಸಿನ್ಸಿನಾಟಿ, ಮಿನ್ನಾಪೊಲಿಸ್, ಸೈಂಟ್ ಲೂಯಿ

ಹತ್ತಿಯ ಶೇಖರಣೆಕೇಂದ್ರಗಳು-ಮೆಂಫಿಸ್. ಮೊಬೈಲ್ ನ್ಯೂಆರ್ಲಿಯನ್ಸ್

**ಪ್ರಸಿದ್ಧನಗರ** - ವಾಷಿಂಗ್ಟನ್ ದೇಶದ ರಾಜಧಾನಿ ಅಧ್ಯಕ್ಷರ ನಿವಾಸ ವಾದ ವೈಟ್‌ಹೌಸ್ ಇದೆ. ಇದು ಯಾವ ರಾಜ್ಯಕ್ಕೂ ಸೇರದ ಕೊಲಂಬಿಯಾ ಜಿಲ್ಲೆಯಿದೆ (ವಾಷಿಂಗ್ಟನ್‌ಡಿಸಿ.) ನ್ಯೂಯಾರ್ಕ್ - ಅನೇಕ ಕೈಗಾರಿಕೆಗಳ ಕೇಂದ್ರ, ಅತ್ಯಂತ ಜನಭರಿತವಾದ ರೇವ್‌ಪಟ್ಟಣ. ಇಲ್ಲಿ ಗಗನ ಚುಂಬಿ

ಗಳಾದ ಅನೇಕ ಸೌಧಗಳೂ ವಿಶ್ವಸಂಸ್ಥೆಯ ಮುಖ್ಯ ಕಾರ್ಯಾಲಯವೂ ಇವೆ.

ಸಂಚಾರಸಂಪರ್ಕ - ಸಾಗಾಣಿಕೆಗೆ ಸಾವಿರಾರು ಮೈಲುದ್ದದ ರೈಲ್ವೆ ಮಾರ್ಗಗಳೂ ಕಾಲುವೆಗಳೂ ವಿಮಾನದಾರಿಗಳೂ ಇವೆ. **ವ್ಯಾಪಾರ**- ಮುಖ್ಯ ಕೆನಡಾ, ಬ್ರೆಜಿಲ್, ಇಂಡಿಯಾ, ಜಪಾನ್ ಮತ್ತು ಯುರೋಪಿನ ದೇಶಗಳೊಡನೆ ನಡೆಯುತ್ತದೆ.

**ಆಡಳಿತ**:— ಇಲ್ಲಿ ಪ್ರಜಾಸತ್ತಾತ್ಮಕ ಆಡಳಿತ (4-7-1776ರಿಂದ) 50 ರಾಜ್ಯಗಳಿಗೂ ಅನ್ವಯಿಸುವ ಸರಕಾರವಿದೆ. ರಾಷ್ಟ್ರಾಧ್ಯಕ್ಷನೇ ಪರಮಾಧಿಕಾರಿ, ಸಹಾಯಕ್ಕೆ ಸೆಕ್ರೆಟರಿಗಳಿದ್ದಾರೆ. ಇಲ್ಲಿ ಕಾಂಗ್ರೆಸ್ ಸಂಸ್ಥೆಯಿರುವುದು.

**ಇ**) I 1) ಅಮೇರಿಕ ಸಂಸ್ಥಾನಗಳಲ್ಲಿ 50 ರಾಜ್ಯಗಳಿವೆ, (ಆರಂಭದಲ್ಲಿ 48 ಆಗಿತು.)

2) ಸುಪೀರಿಯರ್, ಮಿಚಿಗನ್, ಹ್ಯೂರನ್, ಈರಿ, ಆಂಟೇರಿಯಾ ಇವು ಪಂಚಮಹಾಸರೋವರಗಳು

3) ಉತ್ತರಕ್ಕೆ ಪಂಚಮಹಾಸರೋವರಗಳ ಪ್ರದೇಶ, ಪೂರ್ವಕ್ಕೆ ಅಪಲೇಚಿಯನ್ ಪರ್ವತಪ್ರದೇಶ, ಮಧ್ಯಮಿಸಿಸಿಪ್ಪಿ ಮೊದಲಾದ ನದಿಗಳ ಪ್ರದೇಶ, ಪಶ್ಚಿಮಕ್ಕೆ ದಕ್ಷಿಣೋತ್ತರ ನೀಡಿದ (ಪರ್ವತ) ಪ್ರದೇಶ, ಮಧ್ಯೆ ಪ್ರದೇಶ ಭೂವಿಪ್ರದೇಶ. ಇವು ಸ್ವಾಭಾವಿಕ ವಿಭಾಗಗಳು

4) **ಈ ದೇಶದ ಕೈಗಾರಿಕೆಗಳು**:— ಉಕ್ಕಿನ ಕೈಗಾರಿಕೆ, ಹತ್ತಿ ಕೈಗಾರಿಕೆ, ಉಣ್ಣೆಬಟ್ಟೆ ಕೈಗಾರಿಕೆ, ಬೆಣ್ಣೆಗಿಣ್ಣು ಹಿಟ್ಟುತಯಾರಿಕೆಯ ಕೈಗಾರಿಕೆ. ಮಾಂಸತಯಾರಿಕೆ ಮತ್ತು ರಾಸಾಯನಿಕ ವಸ್ತುಗಳ ತಯಾರಿಕೆಯ ಕೈಗಾರಿಕೆ-ಇವು ಮುಖ್ಯವಾಗಿವೆ.

II 1) **ಡೆಟ್ರಾಯಿಟ್**-ಕಾರು ತಯಾರಿಕೆ 2) **ಶಿಕಾಗೊ** - ಮಾಂಸ ತಯಾರಿಕೆ (ಮುಖ್ಯ) ಬೆಣ್ಣೆಗಿಣ್ಣು ಹಿಟ್ಟುತಯಾರಿಕೆಯ ಕೈಗಾರಿ ಕೆ

3) ಸೈಂಟ್ ಲೂಯಿ – ಗೋಧಿಹಿಟ್ಟಿನ ಕೈಗಾರಿಕೆ 4) ಡಲ್ಲಾಸ್ ಎಣ್ಣೆ ಶುದ್ಧೀಕರಣ ಕೈಗಾರಿಕೆ 5) ಇಂಡಿಯಾನಾಪೊಲಿಸ್ - ಮಾಂಸ, ಬೆಣ್ಣೆ ಗಿಣ್ಣು, ಹಿಟ್ಟುತಯಾರಿಕೆಯ ಕೈಗಾರಿಕೆ 6) ನ್ಯೂಜರ್ಸಿ–ಉಣ್ಣೆಬಟ್ಟೆಯ ಕೈಗಾರಿಕೆ.

III 1) ಅ– ಕ್ಯಾಲಿಫೋರ್ನಿಯಾ–ಹಣ್ಣುಗಳ ಬೆಳೆಗೆ ಹಿತಕರವಾದ ಭೂಮಧ್ಯಸಾಮುದ್ರಿಕ ಹವಾಗುಣ ಪ್ರದೇಶದಲ್ಲಿದೆ. ಇಲ್ಲಿ ಚಳಿಗಾಲದಲ್ಲಿ ಮಾತ್ರ ಮಳೆಬೀಳುವುದು - ಹೀಗಾಗಿ ಹಣ್ಣುಗಳನ್ನು ಹೆಚ್ಚಾಗಿ ಬೆಳೆಸುತ್ತಾರೆ.

ಆ) ಇಲ್ಲಿಗೆ ಸಮೀಪ ಅಂಟ್ಲಾಂಟಿಕ ಸಾಗರದ ಲಾಬ್ರಡಾರ್ ಕಡೆಯಿಂದ ಶೀತೋದಕಪ್ರವಾಹವು ಹರಿಯುತ್ತದೆ. ಹೀಗಾಗಿ ಸಮಶೀತೋಷ್ಣವಲಯದಲ್ಲಿರುವ ಈ ದೇಶದ ಪೂರ್ವ ತೀರದಲ್ಲಿ ಚಳಿಗಾಲದಲ್ಲಿ ಚಳಿ ಹೆಚ್ಚು

ಇ) ಅಪಲೇಚಿಯನ್ ಪರ್ವತ ಪ್ರದೇಶದಲ್ಲಿ ಕೈಗಾರಿಕೆಗೆ ಬೇಕಾದ ಕಬ್ಬಿಣ, ಕಲ್ಲಿದ್ದಲು, ಹೇರಳ ಸಂಗ್ರಹಿಸಲಾಗುತ್ತಿದೆ. ಕಚ್ಚಾಮಾಲೀನ ಪೂರೈಕೆಗೂ ಸಂಚಾರಸಾಗಾಣಿಕೆಗೂ ಅನುಕೂಲವಿದೆ. ಇದರಿಂದ ಇಲ್ಲಿನ ಪಟ್ಟಣಗಳಲ್ಲಿ ಕೈಗಾರಿಕೆಗಳು ಕೇಂದ್ರೀಕೃತವಾಗಿವೆ.

2) ಮದರಾಸಿನ ರಬ್ಬರ್ ಕಾರ್ಖಾನೆ, ಶೇಷಶಾಯಿ ಕಾಗದ ಕಾರ್ಖಾನೆ. ಕೊಯಮುತ್ತೂರಿನಲ್ಲಿರುವ ಷುಗರ್‌ಕೇನ್ ಬ್ರೀಡಿಂಗ್ ಇನ್‌ಸ್ಟಿಟೂಟ್, ಶರಾವತಿ ಜಲವಿದ್ಯುದೋಜನೆ, ರಾಮಗುಡಂಥರ್ಮಲ್ ಪವರ್ ಯೋಜನೆ, ಮೈಸೂರ್ ಸೀಮೆಂಟ್ಸ್ ಲಿಮಿಟೆಡ್, ಅಮ್ಮಸಂದ್ರಂ ಮತ್ತು ಪ್ರೀಮಿಯರ್ ಟೈರ್ಸ್ ಲಿಮಿಟೆಡ್, ಕೊಚ್ಚಿನ್ ಇತ್ಯಾದಿಗಳು ಅಮೇರಿಕ ಸರಕಾರದ ನೆರವಿನಿಂದ ನಡೆಯುತ್ತಿರುವುದು.

ಉ) 1 – ಈ ದೇಶದ ಉದ್ಯೋಗಗಳು 1) ನಾನಾತೆರದ ಕೈಗಾರಿಕೆಗಳು 2) ವ್ಯವಸಾಯ 3) ಪಶುಪಾಲನೆ 4) ಮೀನುಗಾರಿಕೆ, 5) ಮರಮೋಪುಗಳ ಕೆಲಸ 6) ರಾಸಾಯನಿಕ ವಸ್ತುಗಳ ತಯಾರಿಕೆ 7) ಪುಸ್ತಕಗಳ ಮುದ್ರಣ ಹಾಗೂ ಪ್ರಕಾಶನ

2) ಅಮೇರಿಕದ ಪ್ರಸ್ತಭೂಮಿಗಳಲ್ಲಿ – ಪ್ರಸಿದ್ಧವಾಗಿರುವುದು.

(ಕೊಲರ್ಯಾಡೋ 2) ಅಮೇರಿಕದ ನೀರಾವರಿ ಯೋಜನೆಗೆ ಪ್ರಸಿದ್ಧಹೊಂದಿದೆ (ಟೆನ್ನಿಸಿವ್ಯಾಲಿಪ್ರೊಜೆಕ್ಟ್ 3) ನಮ್ಮ ದೇಶದಲ್ಲೂ - ಯು ಭತ್ತದ ಬೆಳೆ ಬಳಕೆಗೆ ಒರುತ್ತಿದೆ (ಜಪಾನಿ ಪದ್ಧತಿ) 4) ನಮ್ಮ ದೇಶದ ಶಾಲಾಮಕ್ಕಳಿಗೆ ಉಪಹಾರ ಒದಗಿಸುವ ಸಂಸ್ಥೆ — )ಕೇರ್ ಎಂಬ ಅಮೇರಿಕದ ಖಾಸಗಿ ಸಂಸ್ಥೆ)

2) ಜ್ಞಾಪಕಕ್ಕಾಗಿ ಹೊದಿಸಿ ಬರೆಯುಲಾಗಿದೆ.

1) ಸಂಯುಕ್ತ ಅಮೇರಿಕದ ಪ್ರಥಮಾಧ್ಯಕ್ಷ - ಜಾರ್ಜ್‌ವಾಷಿಂಗ್ಟನ್ 2) ರಷ್ಯಾದ ರಾಷ್ಟ್ರಪಿತನೆಂದರೆ-ಪಿ. ಐ. ಲೆನಿನ್ 3) ರಷ್ಯಾ ರಾಜಕೀಯ ಕ್ರಾಂತಿಗೆ ಕಾರಣ-ಚಕ್ರವರ್ತಿಗಳ ದುರಾಡಳಿತ 4) ರೇಶ್ಮೆಕೈಗಾರಿಕೆಗೆ ಪ್ರಸಿದ್ಧ-ಜಪಾನ್, 5) ಸಂಯುಕ್ತ ಅಮೇರಿಕದಲ್ಲಿ ಭಾರತದ ರಾಯಭಾರಿ - ಶ್ರೀ ಲಕ್ಷ್ಮೀಕಾಂತರ್ಝೂರವರು 6) ಎವರೆಸ್ಟ್ ಮುಟ್ಟಿದ ವೀರ - ತೇನಸಿಂಗ್‌ನೋರ್ಕೆ

3 1) ರಷ್ಯಾ 2) ಸಂಯುಕ್ತಅಮೇರಿಕಾ 3) ಯುನ್ಯಾಟೆಡ್‌ಕಿಂಗ್‌ಡಂ 4) ಜಪಾನ್ ಈ ದೇಶಗಳ ಆಮದು-ರಫ್ತುಗಳು

| ಆಮದುಗಳು | ರಫ್ತುಗಳು |
| --- | --- |
| 1) ಸಕ್ಕರೆ, ಎಣ್ಣೆ, ಕಬ್ಬಿಣ, ಬಟ್ಟೆ, ಮಾಂಸ, ರೈಲ್ವೆಗಾಡಿಗಳು, ಪಾದರಕ್ಷೆಗಳು ಭಾರತದಿಂದ ಕಾಫಿ ಉಣ್ಣೆ, ಸಣಬು, ಗೋಡಂಬಿ, ಸಂಬಾರಜಿನಸುಗಳು | ಗೋಧಿ, ಮರದಿಮ್ಮಿ ಯಂತ್ರೋಪಕರಣಗಳು ಭಾರತಕ್ಕೆ-ಕಾಗದ, ಗೊಬ್ಬರ, ಉಕ್ಕು, ಯಂತ್ರೋಪ ಕರಣಗಳು |
| 2) ರಬ್ಬರ್, ಟೀ, ಸಕ್ಕರೆ, ಕಾಫಿ, ಕೊಕೋ ಎಣ್ಣೆ, ಬಟ್ಟೆ, ಸಣಬು ಕಚ್ಚಾರೇಶ್ಮೆ, ಗೊಡಂಬಿ ಇತ್ಯಾದಿ | ಹತ್ತಿ, ಬಟ್ಟೆ, ಎಣ್ಣೆ, ಗೋಧಿ ಹಿಟ್ಟು, ತಂಬಾಕು. ವಾಹನ ಯಂತ್ರೊಪಕರಣಗಳ ರಾಸಾ, ಯನಿಕ ವಸ್ತುಗಳು |

| | |
|---|---|
| 3) ಹತ್ತಿ, ಉಣ್ಣೆ, ಕಬ್ಬಿಣ, ತಂಬಾಕು, ರಬ್ಬರ್, ಸಣಬು, ಸಕ್ಕರೆ, ಆಹಾರವಸ್ತುಗಳು, ಕೈಗಾರಿಕೆಗೆ ಬೇಕಾದ ಕಚ್ಚಾಮಾಲುಗಳು | ಉಕ್ಕಿನ ಸಾಮಾನುಗಳು ಯಂತ್ರಗಳು, ವಾಹನಗಳು, ರಾಸಾಯನಿಕ ವಸ್ತುಗಳು, ಬಟ್ಟೆಗಳು |
| 4) ಹತ್ತಿ, ಉಣ್ಣೆ ಕಬ್ಬಿಣ ಆಹಾರವಸ್ತುಗಳ | ಕಾಗದ, ಕ್ಯಾಮರಾ, ಟ್ರಾನ್ಸಿಸ್ಟರ್, ಹತ್ತಿ, ರೇಶ್ಮೆಬಟ್ಟೆಗಳು, ವಿದ್ಯುತ್ತಿನ ಉಪಕರಣ, ಯಂತ್ರೋಪಕರಣ, ಆಟದ ಸಾಮಾನು, ಮತ್ತು ಗಾಜಿನ ಸಾಮಾನುಗಳು |

## 22 ಮಹಾಯುದ್ಧಗಳೂ ಪ್ರಪಂಚಸಂಸ್ಥೆಗಳೂ

ಅ) ಜಗತ್ತಿನಲ್ಲಿ 1914ರಿಂದ 1918ರ ವರೆಗೆ, 1939ರಿಂದ 1945ರ ವರೆಗೆ ಎರಡು ಮಹಾಯುದ್ಧಗಳಾಗಿವೆ. ಹಾಗೆ ಯುದ್ಧವಾಗದಂತೆ ಮಾಡುವುದಕ್ಕಾಗಿ ಎರಡು ಪ್ರಪಂಚಸಂಸ್ಥೆಗಳೂ ರಚಿಲ್ಪಟ್ಟಿವೆ. ಒಂದೆರಡು ಶತಮಾನಗಳಿಂದೀಚೆಗೆ ಯುರೋಪಿನ ರಾಷ್ಟ್ರಗಳು ವ್ಯಾಪಾರ ಹಾಗೂ ಸಾಮ್ರಾಜ್ಯ ಬೆಳಸುವುದಕ್ಕಾಗಿ ಸ್ಪರ್ಧಿಸತೊಡಗಿದುವು. ತತ್ಫಲವಾಗಿ ಮೊದಲನೆ ಮಹಾಯುದ್ಧ ನಡೆಯಿತು. ಜರ್ಮನಿ, ಆಸ್ಟ್ರೀಯಾ, ಟರ್ಕಿ ಒಂದುಪಕ್ಷವಾದರೆ ಫ್ರಾನ್ಸ್, ರಷ್ಯಾ, ಬ್ರಿಟನ್ ಇನ್ನೊಂದು ಪಕ್ಷವಾಗಿಕಾದಿದುವು, ಕೊನೆಗೆ ಜರ್ಮನಿ ಸೋತು ವರ್ಸಾಯಿ ಒಪ್ಪಂದದಿಂದ ಯುದ್ಧ ಮುಗಿಯಿತು.

ಯುದ್ಧದ ಪರಿಣಾಮ:— ಲಕ್ಷಾಂತರ ಜನರ ಸಾವುನೋವು, ಅಪಾರ ಹಣ ನಷ್ಟ, ಆಹಾರಾಭಾವ, ಸಂಚಾರ ಸಾಗಾಟಗಳ ಅವ್ಯವಸ್ಥೆ, ರೋಗಗಳ ಹಬ್ಬುವಿಕೆ. ಇವುಗಳಿಂದ ಆರ್ಥಿಕ ಸ್ಥಿತಿಯೇ ಕೆಟ್ಟುಹೋಯಿತು. ಆಗ ಪ್ರಪಂಚದ ಮುಖಂಡರು ಇಂಥ ಯುದ್ಧವಾಗದಂತೆ ತಡೆಗಟ್ಟುವುದಕ್ಕಾಗಿ ಪ್ರಯಯತ್ನಿಸತೊಡಗಿದರು. ಅವರಲ್ಲಿ ಅಮೇರಿಕಾಧ್ಯಕ್ಷ ವುಡ್ರೊವಿಲ್ಸನರ ಪ್ರಯತ್ನದ ಫಲವಾಗಿ ರಾಷ್ಟ್ರಸಂಘವು 1920ರಲ್ಲಿ ಸ್ಥಾಪಿಸಲ್ಪಟ್ಟಿತು. ಆ ಸಂಘವು 15 ವರ್ಷಗಳ ಕಾಲ ನಡೆದು 1936ರಲ್ಲಿ ನಿಂತುಹೋಯಿತು.

**ದ್ವಿತೀಯ ಮಹಾಯುದ್ಧ**:- ಜರ್ಮನಿಯಲ್ಲಿ ನಾಝೀಪಕ್ಷದ ನಾಯಕ ಹಿಟ್ಲರನೂ ಇಟಲಿಯಲ್ಲಿ ಮುಸಲೋನಿಯೂ ಸರ್ವಾಧಿಕಾರಿಯಾದರು. ಆಗ ಆ ರಾಷ್ಟ್ರಗಳು ಒಪ್ಪಂದ ಮೀರಿ ಯುದ್ಧಸನ್ನಾಹಗಳನ್ನು ಸಿದ್ಧಗೊಳಿಸಿದುವು. ಇದರಿಂದ ಎರಡನೆ ಮಹಾಯುದ್ಧಾರಂಭವಾಗಿ 1945ರ ವರೆಗೆ ನಡೆಯಿತು. ಇದರಲ್ಲಿ ಜರ್ಮನಿ, ಇಟಲಿ, ಜಪಾನ್ ಶತ್ರುಪಕ್ಷ. ಬ್ರಿಟನ್, ಫ್ರಾನ್ಸ್, ರಷ್ಯಾ, ಅಮೇರಿಕಾ ಮಿತ್ರಪಕ್ಷ. ಹೀಗೆ ಮಹಾಯುದ್ಧವಾಗಿ ಕೊನೆಗೆ ಶತ್ರುಪಕ್ಷಗಳೆಲ್ಲ ಸೋತುಹೋದವು.

**ವಿಶ್ವಸಂಸ್ಥೆಯ ಸ್ಥಾಪನೆ**:- ಈ ಯುದ್ಧದಿಂದಾದ ಆಸ್ತಿ-ಪಾಸ್ತಿ, ಪ್ರಾಣನಷ್ಟಗಳು ಅಷ್ಟಿಷ್ಟಲ್ಲ. ಇದನ್ನು ನೋಡಿ ರಷ್ಯಾ, ಅಮೇರಿಕ, ಚೈನಾ, ರಷ್ಯಾ ದೇಶಗಳ ಮುಖ್ಯಸ್ಥರು ವಿಶ್ವಸಂಸ್ಥೆಯ ಮೂಲಕ ಶಾಂತಿಸ್ಥಾಪಿಸಲು ಸಭೆಕೂಡಿದರು. ಹಾಗೆ ಪ್ರಪಂಚ ಸಂಸ್ಥೆಯು 24-10-1945ರಲ್ಲಿ ಸ್ಥಾಪಿತವಾಯಿತು. ಪ್ರಧಾನ ಕಛೇರಿ-ನ್ಯೂಯಾರ್ಕಿನಲ್ಲಿ. ಉದ್ದೇಶಗಳು - ಶಾಂತಿ ಭದ್ರತೆಗಳ ರಕ್ಷಣೆ ಇತ್ಯಾದಿ.

### ವಿಶ್ವಸಂಸ್ಥೆ ಹಾಗೂ ಅಂಗಸಂಸ್ಥೆಗಳ ರಚನೆ.

**1) ಸಾಮಾನ್ಯ ಸಭೆ (ಜಗತ್ತಿನ ಪಾರ್ಲಿಮೆಂಟ್)** ಸದಸ್ಯ ರಾಷ್ಟ್ರಗಳ (126) ಕೂಟದಿಂದಾದ ಜನರಲ್ ಎಸೆಂಬ್ಲಿ. ಪ್ರತಿ ರಾಷ್ಟ್ರಗಳ ಐದೈದು ಪ್ರತಿನಿಧಿಗಳಿರಬಹುದು. ಅಧ್ಯಕ್ಷನು ಪ್ರತಿ ವರ್ಷ ಚುನಾಯಿಸಲ್ಪಡುವನು. ಸಭೆ ವರ್ಷಕ್ಕೊಮ್ಮೆ ಸಪ್ಟಂಬರದಲ್ಲಿ ಆಗತ್ಯವಿದ್ದರೆ ವಿಶೇಷ ಸಭೆ ಜರಗುವುದು. ಆಡಳಿತೆ - ಸದಸ್ಯರಾಷ್ಟ್ರಗಳ ವಂತಿಗೆಯಿಂದ ನಡೆಯುವುದು.

**2) ಭದ್ರತಾಮಂಡಲಿ (ಸೆಕ್ಯುರಿಟಿ ಕೌನ್ಸಿಲ್)** ಸದಸ್ಯರ ಸಂಖ್ಯೆ 15. ಚೀನಾ, ಬ್ರಿಟನ್, ಫ್ರಾನ್ಸ್, ರಷ್ಯಾ, ಸಂಯುಕ್ತ ಅಮೇರಿಕಾ ಈ ಐದು (ವಿಟೋಪವರುಳ್ಳ) ಶಾಶ್ವತ ಸ್ಥಾನಗಳು. ಉಳಿದವರು ಎರಡು ವರ್ಷಗಳ ಅವಧಿಗೆ ಸಾಮಾನ್ಯ ಸಭೆಯಿಂದ ಆರಿಸಲ್ಪಡುವರು.

3) **ಆರ್ಥಿಕ ಸಾಮಾಜಿಕ ಮಂಡಲಿ**— ಸದಸ್ಯರು 18 ಮಂದಿ. ಅಧ್ಯಕ್ಷರು ಅವರಲ್ಲೊಬ್ಬರು. ಅವಧಿ ಮೂರು ವರ್ಷ, ಪ್ರತಿ ವರ್ಷ ಆರು ಮಂದಿಗಳಂತೆ ಸಾಮಾನ್ಯ ಸಭೆಯಿಂದಾರಿಸಲ್ಪಡುವರು. ವರ್ಷಕ್ಕೆ ಮೂರು ಸಾರಿ ಸಭೆ ಸೇರುವುದು. ಇದಕ್ಕೆ ಕೆಲವು ಅಂಗ ಸಂಸ್ಥೆಗಳಿವೆ.

4) **ವಿಶ್ವಸ್ಥ ಮಂಡಲಿ**:— ಸ್ವಾಯತ್ತ ಪಡೆಯದ ಪ್ರದೇಶಗಳ ಆಡಳಿತ ನಡೆಸುವ ಸಂಸ್ಥೆ, ಇದರಲ್ಲಿ ಆ ಪ್ರದೇಶಗಳ ಪ್ರತಿನಿಧಿಗಳು, ಭದ್ರತಾ ಸಮಿತಿಯ ಖಾಯಂ ಸದಸ್ಯರು, ಉಳಿದ ರಾಷ್ಟ್ರಗಳ ಪ್ರತಿನಿಧಿಗಳೂ ಇರುವರು. ಅವಧಿ 3 ವರ್ಷ.

5) **ಅಂತರಾಷ್ಟ್ರೀಯ ನ್ಯಾಯಾಲಯ**:— ಭದ್ರತಾಸಮಿತಿ ಮತ್ತು ಸಾಮಾನ್ಯ ಸಭೆಯಿಂದ ಚುನಾಯಿಸಲ್ಪಟ್ಟ 15 ಮಂದಿ ನ್ಯಾಯಾಧೀಶರಿದ್ದಾರೆ: ಅವಧಿ 9 ವರ್ಷ, ಮುಖ್ಯ ನಾಯಾಧೀಶರನ್ನು ಮೂರು ವರ್ಷಗಳಿಗೊಮ್ಮೆ ಆರಿಸುತ್ತಾರೆ.

6) ಸಚಿವಾಲಯ (ಸೆಕ್ರೆಟೇರಿಯಟ್) ವಿಶ್ವಸಂಸ್ಥೆಯ ಮುಖ್ಯಾಧಿಕಾರಿಗೆ ಸೆಕ್ರೆಟರಿ ಜನರಲ್ ಎನ್ನುವರು. ಇವನ ಸಹಾಯಕ್ಕೆ ದೊಡ್ಡ ಸಿಬಂಧಿಯಿದೆ. ಸಾವಿರಾರು ನೌಕರರು ಕೆಲಸ ನಡೆಸುತ್ತಾರೆ.

**ವಿಶ್ವಸಂಸ್ಥೆ ಜಗತ್ತಿನ ಶಾಂತಿರಕ್ಷಣೆಗಾಗಿ ಮಾಡಿದ ಸಾಧನೆಗಳು**-

ದಕ್ಷಿಣ ಕೊರಿಯಾದ ಬಿಡುಗಡೆ, ಡಚ್ಚರಿಂದ ಇಂಡೋನೇಷ್ಯಾದ ಬಿಡುಗಡೆ, ಕಾಶ್ಮೀರ ಯುದ್ಧದ ನಿಲುಗಡೆಯ ವ್ಯವಸ್ಥೆ, ಸುಯೇಜ್ ಕಾಲುವೆ ವಿವಾದದ ಪರಿಹಾರ, ಹಿಂದೆ ಅರಬರಿಗೂ ಇಸ್ರೇಲರಿಗೂ ಇದ್ದ ವಿವಾದದ ತೀರ್ಮಾನ, ಲೆಬನಾನ್ ಜೋರ್ಡಾನಗಳಿಂದ ಇಂಗ್ಲೀಷ್ ಮತ್ತು ಅಮೇರಿಕಾ ಸೈನ್ಯಗಳು ಹೊರ ಬಂದುದು, ಭಾರತ ಪಾಕಿಸ್ಥಾನಗಳ ಯುದ್ಧಸ್ತಂಭನ ಇತ್ಯಾದಿ.

**ವಿಶ್ವಸಂಸ್ಥೆಯ ಕಾರ್ಯದಲ್ಲಿ ಭಾರತದ ಪಾತ್ರ:-** 1) ಭಾರತವು ಅಂತರಾಷ್ಟ್ರೀಯ ಸಂಘದಲ್ಲಿ ತಾಟಸ್ಥ್ಯ ಧೋರಣೆಯನ್ನನುಸರಿಸುತ್ತಾ ಸಹ ಜೀವನ ತತ್ವವನ್ನು ಅಂಗೀಕರಿಸಿದೆ. 2) ವಿಶ್ವಶಾಂತಿ ಸ್ಥಾಪನೆಯಲ್ಲಿ ಮಹತ್ತಾದ ಪಾತ್ರವಹಿಸಿ ವಿಶ್ವಸಂಸ್ಥೆಯೊಡನೆ ಸಹಕರಿಸುತ್ತಿದೆ. 3) ಕೊರಿಯಾ-ಇಜಿಪ್ಟ್ ದೇಶಗಳಲ್ಲಿ ಯುದ್ಧ ನಿಲ್ಲಿಸುವ ಬಗೆಗೆ ಸಹಾಯಮಾಡಿದೆ. 4) ರಷ್ಯಾ ಅಮೇರಿಕಾ ದೇಶಗಳ ನಡುವೆ ಬಂಧುತ್ವ ಬೆಳೆಯಲು ಪ್ರಯತ್ನಿಸಿದೆ-ಮತ್ತು ಪ್ರಯತ್ನಿಸುತ್ತಾ ಇದೆ. 5) ಮುಖ್ಯವಾಗಿ ವಿಶ್ವಸಂಸ್ಥೆಯ ಉದಾತ್ತ ಧ್ಯೇಯಗಳನ್ನು ಸಾಧಿಸಲು ಶ್ರಮಿಸುತ್ತಿರುವುದು.

ಇ) I 1) ವ್ಯಾಪಾರ, ವಸಾಹತು, ರಾಜ್ಯ ವಿಸ್ತರಣೆಯ ಸ್ಪರ್ಧೆಯಿಂದ ರಾಷ್ಟ್ರ ರಾಷ್ಟ್ರಗಳಲ್ಲಿ ದ್ವೇಷಭಾವವು ಬೆಳೆಯುತ್ತಿತ್ತು. ಈ ಮಧ್ಯೆ ಆಸ್ಟ್ರಿಯಾದ ರಾಜಕುಮಾರನು (ಪಡಿನಾರ್ಂಡ್) ಪತ್ನಿ ಸಮೇತ ಸೆರಜಾವೊಕ್ಕೆ ಹೋದಾಗ ಸರ್ಬಿಯದವನಿಂದ ಕೊಲೆಯಾಗಲ್ಪಟ್ಟನು. ಇದರಿಂದ ಆಸ್ಟ್ರಿಯಾ ಸರ್ಬಿಯಾದ ಮೇಲೆ ಯುದ್ಧ ಸಾರಿತು. ಆಗ ಜರ್ಮನಿಯು ಆಸ್ಟ್ರಿಯಕ್ಕೂ ರಷ್ಯಾ ಸರ್ಬಿಯಕ್ಕೂ ಬೆಂಬಲ ಕೊಟ್ಟವು. ಮತ್ತೆ ಫ್ರಾನ್ಸ್, ಬ್ರಿಟನ್ ಮೊದಲಾದ ದೇಶಗಳು ಯುದ್ಧಕ್ಕಿಳಿದಾಗ ಜಗತ್ತಿನ ಮಹಾಯುದ್ಧವಾಗಿ ಪರಿಣಮಿಸಿತು.

2) ರಾಷ್ಟ್ರಸಂಘವು ಯುದ್ಧ ನಿಷೇದ, ಶಾಂತಿ ರಕ್ಷಣೆಯ ಧ್ಯೇಯದಿಂದ ಸ್ಥಾಪಿತವಾಗಿತ್ತು. ಆದರೆ 1936ರ ವರೆಗೆ ಕಾರ್ಯ ನಡೆಸಿದರೂ ಆ ಮೇಲೆ ತಲೆಯೆತ್ತಿದ ಯುದ್ಧ ನಿಲ್ಲಿಸಲು ಸಾಧ್ಯವಾಗಲಿಲ್ಲ. ಕಾರಣಗಳು- ಆ ಸಂಘದಲ್ಲಿ ಸೋತ ರಾಷ್ಟ್ರಗಳಿಗೆ ಪ್ರವೇಶವಿರಲಿಲ್ಲ. ರಷ್ಯಾ, ಅಮೇರಿಕಾ ದೇಶಗಳು ಹೊರಗಿದ್ದುವು. ಪರಿಹಾರದ್ರವ್ಯದ ವಿಚಾರದಲ್ಲಿ ಬ್ರಿಟನ್, ಫ್ರಾನ್ಸ್‌ಗಳಿಗೆ ಹೆಚ್ಚಿನ ಲಾಭವಿದ್ದುದರಿಂದ ಸದಸ್ಯ ರಾಷ್ಟ್ರಗಳ ಬೆಂಬಲವು ಸಂಘಕ್ಕಿರಲಿಲ್ಲ. ಆರ್ಥಿಕ ಸಮಸ್ಯೆಗಳುಂಟಾದಾಗ ಸಂಘದ ಸಲಹೆಗಳನ್ನು ಗೌರವಿಸಲಿಲ್ಲ. ಕಡೆಗೆ ಜಪಾನು, ಜರ್ಮನಿಗಳು ದುರಾಕ್ರಮಣಕ್ಕಿಳಿದಾಗ ತಡೆಗಟ್ಟುವ ಶಕ್ತಿಯಿಲ್ಲದೆ ರಾಷ್ಟ್ರಸಂಘವು ನಿಂತುಹೋಯಿತು.

3) ಹಿಟ್ಲರನು ಸರ್ವಾಧಿಕಾರಿಯಾದ ಮೇಲೆ ಜರ್ಮನಿಯ ಪ್ರಭಾವ ಹೆಚ್ಚಿತು. ವರ್ಸಾಯಿ ಒಪ್ಪಂದ ಮೀರಿ ಪ್ರತಿವರ್ಷ ಸಲ್ಲಿಸಬೇಕಾದ ತಪ್ಪು ದಂಡ ಕೊಡದೆ, ನಿಶ್ಶಸ್ತ್ರೀಕರಣಕ್ಕೂ ಒಪ್ಪದೆ ಸೈನ್ಯಬಲ ಹೆಚ್ಚಿಸಿತು. ಯುದ್ಧೋಪಕರಣಗಳು ಸಿದ್ಧವಾದೊಡನೆ ರೈನ್‌ಲ್ಯಾಂಡ್ ಮತ್ತು ಆಸ್ಟ್ರಿಯ ವನ್ನು ಆಕ್ರಮಿಸಿತು. ಯಹೂದ್ಯರನ್ನು ಕ್ರೂರತನದಿಂದ ತಳ್ಳಿ ಪೋಲೆಂಡನ್ನು ಮುತ್ತಿತು. ಫ್ರಾನ್ಸಿನ ವರೆಗೂ ಮುಂದರಿದು ಬ್ರಿಟನಿನ ಮೇಲೆ ಬಾಂಬ್ ದಾಳಿ ಮಾಡಿತು. ಇದರಿಂದ ದ್ವಿತೀಯ ಯುದ್ಧಾರಂಭವಾಯಿತು. ಇದಕ್ಕೆ ಜರ್ಮನಿಯೇ ಕಾರಣ.

4) ವಿಶ್ವಸಂಸ್ಥೆಯ ಮುಖ್ಯಾಂಗಗಳು 1) ಸಾಮಾನ್ಯ ಸಭೆ 2) ಭದ್ರತಾ ಸಮಿತಿ 3) ಆರ್ಥಿಕ ಸಾಮಾಜಿಕ ಮಂಡಲ 4) ವಿಶ್ವಸ್ಥ ಮಂಡಲ 5) ಅಂತರಾಷ್ಟ್ರೀಯ ನ್ಯಾಯಾಲಯ 6) ಸಚಿವಾಲಯ.

1) ವಿಶ್ವಸಂಸ್ಥೆಗೆ ಸಂಬಂಧಪಟ್ಟ ಶಾಂತಿ, ಭದ್ರತೆ, ನಿಶ್ಯಸ್ತ್ರೀಕರಣ ಮತ್ತು ಅಂಗಸಂಸ್ಥೆಗಳ ಸದಸ್ಯರ ಆಯ್ಕೆ ಮೊದಲಾದುವನ್ನು ಪರಿಶೀಲಿಸು ವುದು. ವರ್ಷಕ್ಕೊಮ್ಮೆ ಸಭೆಕೂಡಿ ಆಯವ್ಯಯ ಪಟ್ಟಿಗಳನ್ನು ಮಂಜೂರು ಮಾಡುವುದು. 2) ಸದಸ್ಯರಾಷ್ಟ್ರಗಳ ಸಮಸ್ಯಾ ಪರಿಹಾರ, ಅಂತರ್ರಾಷ್ಟ್ರಿಯ ಶಾಂತಿ ಭದ್ರತೆಗಳನ್ನು ಕಾಯ್ದುಕೊಳ್ಳುವಿಕೆ- ಇದೇ ಇದರ ಮುಖ್ಯ ಕಾರ್ಯ. ಆದರೆ ಖಾಯಂ ಸದಸ್ಯರೆಲ್ಲರೂ ಒಪ್ಪದ ಹೊರತು ಯಾವ ನಿರ್ಣ ಯವೂ ಸ್ವೀಕೃತವಲ್ಲ. 3) ಸದಸ್ಯರಾಷ್ಟ್ರಗಳ ಆರ್ಥಿಕ ಹಾಗೂ ಸಾಮಾಜಿಕ ಅಭಿವೃದ್ಧಿ, ಜನರ ಜೀವನ ಮಟ್ಟವನ್ನು ಉತ್ತಮಗೊಳಿಸುವುದು. ಅಲ್ಲದೆ ಶೈಕ್ಷಣಿಕ, ಸಾಂಸ್ಕೃತಿಕ ಮೊದಲಾದ ವಿಷಯಗಳಲ್ಲಿ (ಉಪಾಂಗಗಳ ಮೂಲಕ) ಮಾರ್ಗದರ್ಶನ ಮಾಡುವುದು. 4) ಸ್ವಾಯತ್ತ ಪಡೆಯದ ಪ್ರದೇಶಗಳ ಆಡಳಿತವು ಸಮರ್ಪಕ ರೀತಿಯಲ್ಲಿ ನಡೆಯುವಂತೆ ಮೇಲ್ವಿಚಾರಣೆ ಮಾಡಿ ಅಭಿವೃದ್ಧಿಗೊಳಿಸುವುದು. ಮತ್ತೆ ಸ್ವತಂತ್ರವಾಗಿ ಆಳುವಂತೆ ಏರ್ಪಡಿಸುವುದು. 5) ಈ ನ್ಯಾಯಾಲಯ ರಜಾಕಾಲ ಬಿಟ್ಟು ಇಡೀ ವರ್ಷ ನಡೆಯುತ್ತದೆ. ರಾಷ್ಟ್ರ ರಾಷ್ಟ್ರಗಳಲ್ಲುಂಟಾದ ವಿವಾದಗಳ ವಿಚಾರಣೆ ಮತ್ತು ಸಲಹೆ ಸೂಚನೆ ಕೊಡುವುದು. 6) ಸಚಿವಾಲಯವು ವಿಶ್ವಸಂಸ್ಥೆಯ ಅಂಗ

ಸಂಸ್ಥೆಗಳ ಹಾಗೂ ಉಪಾಂಗ ಸಂಸ್ಥೆಗಳನ್ನು ಸಂಘಟಿಸುತ್ತದೆ. ಇಲ್ಲಿ ಸದಸ್ಯ ರಾಷ್ಟ್ರಗಳ ಸಾವಿರಾರು ನೌಕರರು ಕೆಲಸ ನಡೆಸುತ್ತಿದ್ದಾರೆ.

II ಬಿಟ್ಟ ಪದಗಳು. 1) 1914 2) ವುಡ್ರೋವಿಲ್ಸನ್ 3) ವರ್ಸಾಯಿ 4) ಜಪಾನು.

III 1) ಧ್ವಜಗಳ ಚಿತ್ರ ಸಂಗ್ರಹಮಾಡುವುದು. 2) ವಿಶ್ವಸಂಸ್ಥೆಯ ಧ್ವಜದ ಸಿದ್ಧತೆ 2 ಧ್ವಜಾರೋಹಣದ ವ್ಯವಸ್ಥೆ. 3) ಸದಸ್ಯರಾಷ್ಟ್ರಗಳ ಪಟ್ಟಿ ತಯಾರಿಸಿ ವಿವರಿಸುವಿಕೆ. 4) ವಿಶ್ವಸಂಸ್ಥೆಯ ಅಂಗೋಪಾಂಗ ಸಂಸ್ಥೆಗಳ ವಿವರಣೆ. 5) ಅಂಗ ಸಂಸ್ಥೆಗಳು ಸಾಧಿಸಿದ ಕಾರ್ಯಕ್ರಮಗಳು. 6) ಭಾಷಣಗಳ ಏರ್ಪಾಡು. (ಸಂಸ್ಥೆಯು ಸಾಧಿಸಿದ, ಸಾಧಿಸತಕ್ಕ ವಿಷಯಗಳ ನಿರೂಪಣೆ.)

2) ವಿಶ್ವಸಂಸ್ಥೆಗೆ ಸೇರದ ರಾಷ್ಟ್ರ (ಚಿಯಾಂಗ್ ಕೈಷೇಕ್ ಸರಕಾರ ಬಿಟ್ಟು) ಚೀನವು ವಿಶ್ವಸಂಸ್ಥೆಗೆ ಸೇರಲು ಅಪೇಕ್ಷಾ ಪತ್ರ ಒಪ್ಪಿಸಿದೆ. ಕೆಲವು ರಾಷ್ಟ್ರಗಳ ಅನುಮೋದನೆಯಿದ್ದರೂ ಅಮೇರಿಕದಂತಹ ಮಹಾರಾಷ್ಟ್ರಗಳು ವಿರೋಧಿಸುತ್ತಿವೆ. ಹೀಗಾಗಿ ಸೇರಲಾಗಲಿಲ್ಲ.

ಉ) 1) ವಿಶ್ವಸಂಸ್ಥೆಯ ಉಪಾಂಗ ಸಂಸ್ಥೆಗಳು:—
ಅಂತರಾಷ್ಟ್ರೀಯ ಕಾರ್ಮಿಕ ಸಂಸ್ಥೆ, ಶೈಕ್ಷಣಿಕ ವೈಜ್ಞಾನಿಕ ಸಾಂಸ್ಕೃತಿಕ ಸಂಸ್ಥೆ (UNESCO) ಆಹಾರ ಮತ್ತು ಕೃಷಿ ಸಂಸ್ಥೆ, ವಿಶ್ವಬೇಂಕ್, ಆರೋಗ್ಯ ಸಂಸ್ಥೆ, ವೈಮಾನಿಕ ಸಂಸ್ಥೆ ಮೊದಲಾದುವು.

2) ವಿಶ್ವಸಂಸ್ಥೆಯ ಧ್ಯೇಯಗಳಾವುವು?

IV 1) ಅಂತರಾಷ್ಟ್ರೀಯ ಶಾಂತಿಭದ್ರತೆಯ ರಕ್ಷಣೆ. 2) ರಾಷ್ಟ್ರ ರಾಷ್ಟ್ರಗಳಲ್ಲಿ ಸಹಕಾರ ಹಾಗೂ ಪ್ರೇಮ ಬಾಂಧವ್ಯದಿಂದ ತಮ್ಮಲ್ಲಿದ್ದ ಭಿನ್ನಾಭಿಪ್ರಾಯಗಳನ್ನು ಇತ್ಯರ್ಥಮಾಡಿಕೊಳ್ಳುವುದು. 3) ಬಲಪ್ರಯೋಗ ಮಾಡಿದ ರಾಷ್ಟ್ರಗಳ ಮೇಲೆ ಉಳಿದ ರಾಷ್ಟ್ರಗಳು ಪ್ರತಿಬಂಧಕ ಹಾಕುವುದು. 4) ಮಾನವರ ಹಕ್ಕುಗಳನ್ನು ಗೌರವಿಸುವುದು. 5) ಮಾನವರ ಆರ್ಥಿಕ

ಸಾಮಾಜಿಕಾಭಿವೃದ್ಧಿಗಳನ್ನು ಅಂತರಾಷ್ಟ್ರೀಯ ಸಂಸ್ಥೆಗಳ ಮೂಲಕ ಸಾಧಿಸುವುದು. 6) ಅಂತರಾಷ್ಟ್ರೀಯ ಆರ್ಥಿಕ - ಸಾಮಾಜಿಕ - ಸಾಂಸ್ಕೃತಿಕಾದಿ ಸಮಸ್ಯೆಗಳನ್ನು ಬಗೆಹರಿಸುವುದು. 7) ಮುಂದರಿದ ರಾಷ್ಟ್ರಗಳು ಹಿಂದುಳಿದ ರಾಷ್ಟ್ರಗಳಿಗೆ ಸಹಾಯ ಕೊಡುವುದು. 8) ಮುಂದಿನ ಜನಾಂಗಕ್ಕೆ ಯುದ್ಧ ಭೀತಿಯನ್ನು ತಪ್ಪಿಸುವುದು.

**3) ವಿಶ್ವಸಂಸ್ಥೆಯ ಮೂಲ ಪುರುಷರು—** 1) ರೂಸ್‌ವೆಲ್ಟ್-ಅಮೇರಿಕಾಧ್ಯಕ್ಷ 2) ಸ್ಟಾಲಿನ್-ರಷ್ಯಾದ ಮುಖ್ಯಾಧಿಕಾರಿ 3) ವಿನ್‌ಸ್ಟನ್ ಚರ್ಚಿಲ್ - ಬ್ರಿಟನ್‌ನ ಪ್ರಧಾನಿ 4) ಚಿಯಾಂಗ್ ಕೈಷೇಕ್ - ಚೈನಾ.

**4) ಹೊಂದಿಸಿ ಬರೆದಿದೆ.** 1) ಯುನೋಸ್ಕೊ - ಫ್ಯಾರಿಸ್ 2) ಲೀಗ್ ಓಫ್‌ನೇಶನ್ಸ್ - ಜಿನೇವಾ (ಸ್ವಿಜಲ್ಯಾಂಡ್) 3) ವಿಶ್ವಬೇಂಕ್ - ವಾಷಿಂಗ್ಟನ್ 4) ಅಂತರಾಷ್ಟ್ರೀಯ ನ್ಯಾಯಾಲಯ - ಹೇಗ್ (ಹಾಲೆಂಡ್) 5) ಜನಸಂಖ್ಯೆಯಲ್ಲಿ ಒಂದನೇ ರಾಷ್ಟ್ರ - ಚೈನಾ 6) ವಿಸ್ತೀರ್ಣದಲ್ಲಿ ದೊಡ್ಡ ದೇಶ - ರಷ್ಯಾ.

## 23 ಪಂಚವಲಯಗಳು.

ಅ) ಭೂಮಿಯು ಗೋಲಾಕಾರ; ಉತ್ತರ ತುದಿಗೆ ಉತ್ತರ ಧ್ರುವ ದಕ್ಷಿಣ ತುದಿಗೆ ದಕ್ಷಿಣ ಧ್ರುವ. ಧ್ರುವಗಳನ್ನು ಸೇರಿಸುವ ನೇರವಾದ ಊಹಾರೇಖೆಗೆ ಅಕ್ಷ. **ಭೂಮಿಯ ಚಲನೆಗಳು** — 1) ದೈನಂದಿನ ಚಲನೆ (ಭೂಮಿಗೆ ಅಕ್ಷದ ಮೇಲೆ ಒಮ್ಮೆ ಸುತ್ತಲು 24 ತಾಸುಗಳು ಬೇಕು.) 2) **ವಾರ್ಷಿಕ ಚಲನೆ** — (ಭೂಮಿಗೆ ಸೂರ್ಯನ ಸುತ್ತಲೂ ಅಂಡಾಕಾರದ ಮಾರ್ಗದಲ್ಲಿ ಸುತ್ತಿ ಬರಲು ಒಂದು ವರ್ಷ ಬೇಕು.

**ವಲಯಗಳು:—** ಭೂಮಿಯು 23½ ಡಿಗ್ರಿಯಷ್ಟು ಓರೆಯಾಗಿ ತಿರುಗುವುದರಿಂದ ಭೂಭಾಗಗಳಲ್ಲಿ ಉಷ್ಣಾಂಶದ ವ್ಯತ್ಯಾಸವಾಗುವುದು.

ಇದರಿಂದ ಐದು ವಲಯಗಳನ್ನಾಗಿ ವಿಂಗಡಿಸಿರುವರು. **ವೃತ್ತಗಳು:**— 1) ದಕ್ಷಿಣೋತ್ತರ ಧ್ರುವಗಳ ಸಮದೂರಕ್ಕೆ ಭೂಗೋಳದ ಮಧ್ಯದಲ್ಲಿರುವುದು- ಸಮಭಾಜಕ ವೃತ್ತ - ಭೂಮಧ್ಯರೇಖೆ. 2) ಈ ರೇಖೆಯಿಂದ 23½ ಡಿಗ್ರಿ ಉತ್ತರಕ್ಕೆ ಕರ್ಕವೃತ್ತ 3) ಹಾಗೆ ದಕ್ಷಿಣಕ್ಕೆ ಮಕರವೃತ್ತ. 4) ಭೂ ಮಧ್ಯರೇಖೆಯಿಂದ 66½ ಡಿಗ್ರಿ ಉತ್ತರಕ್ಕೆ ಉತ್ತರ ಮೇರುವೃತ್ತ. 5) ಹಾಗೆ ದಕ್ಷಿಣಕ್ಕಿರುವುದು ದಕ್ಷಿಣ ಮೇರುವೃತ್ತ.

**ಉಷ್ಣಾಂಶದಲ್ಲಾಗುವ ವ್ಯತ್ಯಾಸಗಳು:**— 1) ಭೂಮಿಯ ವಾರ್ಷಿಕ ಗತಿಯಲ್ಲಿ ಉತ್ತರ ಧ್ರುವವು 6 ತಿಂಗಳು ಸೂರ್ಯನ ಕಡೆಗೆ ವಾಲಿರುವುದು. ಆಗ ಸೂರ್ಯಕಿರಣಗಳು ಭೂಮಧ್ಯ ರೇಖೆಯಿಂದ 23½ ಡಿಗ್ರಿಗಳಷ್ಟು ಉತ್ತರಕ್ಕೆ ನೇರವಾಗಿ ಬೀಳುತ್ತವೆ. ಆಗ ಆ ಭಾಗದಲ್ಲಿ ಬೇಸಗೆ. ದಕ್ಷಿಣದಲ್ಲಿ ಚಳಿಗಾಲ. 2) ಹಾಗೆ ದಕ್ಷಿಣಧ್ರುವವು 6 ತಿಂಗಳು ಸೂರ್ಯನ ಕಡೆಗೆ ವಾಲಿರುವಾಗ ದಕ್ಷಿಣ ಭಾಗದಲ್ಲಿ ಬೇಸಗೆ, ಉತ್ತರದಲ್ಲಿ ಚಳಿಗಾಲ. ಹೀಗಾಗಿ ಕರ್ಕಮಕರ ವೃತ್ತಗಳ ಮಧ್ಯಭಾಗ ಉಷ್ಣವಲಯ. 3) ಕರ್ಕ ವೃತ್ತದಿಂದ ಮೇರುವೃತ್ತದ ವರೆಗೆ ಉತ್ತರ ಸಮಶೀತೋಷ್ಣವಲಯ. ಮಕರ ವೃತ್ತದಿಂದ ದಕ್ಷಿಣ ಮೇರುವೃತ್ತದ ವರೆಗೆ ದಕ್ಷಿಣ ಸಮಶೀತೋಷ್ಣವಲಯ. 4) ಮೇರುವೃತ್ತದಿಂದ ಧ್ರುವದ ವರೆಗೆ ಶೀತವಲಯಗಳಾಗಿವೆ.

ಇ) I (1) ಸಮಭಾಜಕವೃತ್ತ (ವಿಷುವವೃತ್ತ) ಕರ್ಕವೃತ್ತ, ಮಕರ ವೃತ್ತ, ಉತ್ತರ ಮೇರುವೃತ್ತ, ದಕ್ಷಿಣ ಮೇರುವೃತ್ತ. ಹೀಗೆ ಐದು ರೇಖೆಗಳು ಮುಖ್ಯವಾಗಿವೆ.

2) ಉಷ್ಣವಲಯ, 2) ಉತ್ತರ ಸಮಶೀತೋಷ್ಣವಲಯ, 3) ದಕ್ಷಿಣ ಸಮಶೀತೋಷ್ಣ ವಲಯ, 4) ಉತ್ತರ ಶೀತವಲಯ, 5) ದಕ್ಷಿಣ ಶೀತವಲಯ ಹೀಗೆ ಪಂಚವಲಯಗಳಿವೆ.

3) **ಏಷ್ಯಾ ಖಂಡ** — ಉಷ್ಣವಲಯ, ಉತ್ತರ ಸಮಶೀತೋಷ್ಣ ವಲಯ, ಉತ್ತರ ಶೀತವಲಯಗಳಲ್ಲಿದೆ. 2) **ಯುರೋಪ್ ಖಂಡ** —

ಉತ್ತರ ಸಮಶೀತೋಷ್ಣವಲಯ ಮತ್ತು ಉತ್ತರ ಶೀತವಲಯಗಳಲ್ಲಿದೆ. 3) **ಆಫ್ರಿಕಾ ಖಂಡ** — ಉಷ್ಣವಲಯ ಮತ್ತು ದಕ್ಷಿಣ ಸಮಶೀತೋಷ್ಣ ವಲಯಗಳಲ್ಲಿದೆ. 4) **ಆಸ್ಟ್ರೇಲಿಯಾ** — ಉಷ್ಣವಲಯ ಮತ್ತು ದಕ್ಷಿಣ ಸಮಶೀತೋಷ್ಣ ವಲಯಗಳಲ್ಲಿದೆ. 5) **ಉತ್ತರ ಅಮೇರಿಕಾ** — ಉಷ್ಣ ವಲಯ ಉತ್ತರ ಸಮಶೀತೋಷ್ಣವಲಯ ಮತ್ತು ಉತ್ತರ ಶೀತವಲಯ ಗಳಲ್ಲಿದೆ. 6) **ದಕ್ಷಿಣ ಅಮೇರಿಕಾ** — ಉಷ್ಣವಲಯ ಹಾಗೂ ದಕ್ಷಿಣ ಸಮಶೀತೋಷ್ಣ ವಲಯಗಳಲ್ಲಿದೆ.

II **ಬಿಟ್ಟ ಶಬ್ದಗಳು.** 1) ಹಗಲು ರಾತ್ರಿಗಳು. 2) ಋತು ಭೇದಗಳು 3) ಬೇಸಿಗೆ ಕಾಲ.

III **ಮೆಗಲಾನ್.** ಭೂಪ್ರದಕ್ಷಿಣೆ ಮಾಡಿದವರಲ್ಲಿ ಮೊದಲಿಗ. ಭೂಮಿಯು ಗೋಲಾಕಾರವಿರುವುದರಿಂದ ಸುತ್ತಲೂ ತಿರುಗಿದರೆ ಇಂಡಿಯಾ, ಚೀನಾ ಮೊದಲಾದ ದೇಶಗಳು ಸಿಗಬಹುದೆಂದು ನಿಶ್ಚಯಿಸಿದ್ದ ಪೋರ್ಚುಗಲ್ ನಾವಿಕ. ಇವನು (ಕ್ರಿ. ಶ. 1519) ಸ್ಪೈನಿನ ದೊರೆ 5ನೇ ಚಾರ್ಲ್ಸ್‌ನ ಅಪ್ಪಣೆ ಪಡೆದು 5 ಹಡಗುಗಳಲ್ಲಿ ಸೈನ್ಯ ಕೂಡಿಕೊಂಡು ಅಟ್ಲಾಂಟಿಕ್ ಸಾಗ ರದಲ್ಲಿ ಪ್ರಯಾಣ ಮಾಡುತ್ತ ಬ್ರೆಜಿಲ್‌ಗೆ ತಲಪಿದ. ಅಲ್ಲಿಂದ ಹೊರಟು ಶಾಂತಸಾಗರವನ್ನು ಸೇರಿ ಅದಕ್ಕೆ ಫೆಸಫಿಕ್ ಎಂದು ಹೆಸರಿಟ್ಟು ಮೂರು ತಿಂಗಳಲ್ಲಿ ಫಿಲಿಫೈನ್ಸ್ ದ್ವೀಪಗಳಿಗೆ ಹೋದನು. ಮುಂದೆ ಸೇಬು ದ್ವೀಪಕ್ಕೆ ಸೇರಿ ಅಲ್ಲಿನ ರಾಜನೊಡನೆ ಸ್ನೇಹ ಬೆಳೆಸುತ್ತಾ ಆ ರಾಜನ ಪರವಾಗಿ ಯುದ್ಧ ಮಾಡುವಾಗ ತೀರಿಹೋದನು. ಇವನಿಂದ ಪೃಥ್ವಿಯು ಗೋಲಾಕಾರವಿದೆ ಯೆಂಬ ತತ್ವವು ಸ್ಥಿರವಾಯಿತು. ಅಲ್ಲದೆ ಪೂರ್ವತೀರದ ದೇಶಗಳಿಗೆ ಹೋಗುವ ಮತ್ತೊಂದು ಜಲಮಾರ್ಗವೂ ಶೋಧಿಸಲ್ಪಟ್ಟಿತು.

## 24 ಸ್ವಾಭಾವಿಕ ವಿಭಾಗಗಳು

ಅ) ಭೂಮಿಯ ಮೇಲಣ ಪ್ರದೇಶಗಳನ್ನು ವಾಯುಗುಣ, ಸಸ್ಯವರ್ಗ ಹಾಗೂ ಪ್ರಾಣಿವರ್ಗಗಳಿಗೆ ತಕ್ಕಂತೆ ಕೆಲವು ಸ್ವಾಭಾವಿಕ ವಿಭಾಗಗಳನ್ನಾಗಿ

ಮಾಡಬಹುದು. ಒಂದು ವಿಭಾಗವು ತನ್ನದೇ ಆದ ಲಕ್ಷಣಗಳನ್ನು ಹೊಂದಿರುವ ಕಾರಣ ಗೆರೆ ಎಳೆದು ವಿಂಗಡಿಸಲು ಸಾಧ್ಯವಿಲ್ಲ. ಆದರೆ ಪ್ರಾಕೃತಿಕ ಲಕ್ಷಣಗಳು ಸ್ವಲ್ಪ ಸ್ವಲ್ಪ ಬದಲಾಗಲೂಬಹುದು.

**ಸ್ವಾಭಾವಿಕ ವಿಭಾಗಗಳು** 1) ಸಮಭಾಜಕವೃತ್ತ ಪ್ರದೇಶ 2) ಉಷ್ಣವಲಯದ ಹುಲ್ಲುಗಾವಲುಗಳು 3) ಮಾನ್ಸೂನ್ ವಾಯುಗುಣ ಪ್ರದೇಶಗಳು 4) ಮೆಡಿಟರೇನಿಯನ್ ವಾಯುಗುಣ ಪ್ರದೇಶಗಳು 5) ಮರುಭೂಮಿಗಳು 6) ಸಮಶೀತೋಷ್ಣ ಅರಣ್ಯಪ್ರದೇಶಗಳು 7) ಸಮಶೀತೋಷ್ಣ ಹುಲ್ಲುಗಾವಲುಗಳು 8) ಅತಿಶೀತಪ್ರದೇಶಗಳು

**ವಾಯುಗುಣ:**– ಒಂದೇ ಪ್ರದೇಶದಲ್ಲಿ ಬೇರೆ ಬೇರೆ ಕಾಲಗಳಲ್ಲಿ ಕಂಡುಬರುವ ಉಷ್ಣಾಂಶ, ವಾಯುವಿನ ಒತ್ತಡ, ಮಳೆ ಇವುಗಳ ಏರಿಳಿತಗಳ ಸರಾಸರಿ ಮೊತ್ತವೇ ಆ ಪ್ರದೇಶದ ವಾಯುಗುಣ. ಇದನ್ನು ತಿಳಿದರೆ ಅಲ್ಲಿನ ಸಸ್ಯವರ್ಗ ಪ್ರಾಣಿವರ್ಗ ಹೇಗಿದೆಯೆಂದು ಹೇಳಬಹುದು.

**ಸಸ್ಯವರ್ಗ:** — ಮಳೆ ಬಿಸಿಲು ಹೆಚ್ಚಾಗಿರುವ ಉಷ್ಣವಲಯದಲ್ಲಿ ದಟ್ಟ ಕಾಡುಗಳಿವೆ. ಮಳೆ ವಿರಳವಾದಂತೆ ಕುರುಚಲುಗಿಡಗಳು ಬಹಳ. ಮಳೆಕಡಿಮೆಯಾದಂತೆ ಕಾಡುಗಳ ಸಾಂದ್ರತೆ ಕಡಿಮೆ. ಸಮಶೀತೋಷ್ಣ ಪ್ರದೇಶದಲ್ಲಿ ಅಗಲೆಲೆಯ ಕಾಡುಗಳೂ ಸೂಚೀಪತ್ರದ ಮರಗಳೂ (ಶೀತಪ್ರದೇಶ) ಇವೆ. ಮೆಡಿಟರೇನಿಯನ್ ಪ್ರದೇಶದಲ್ಲಿ ಹಣ್ಣುಹಂಪಲುಗಳ ಬೆಳೆ ಅಧಿಕ. ಇನ್ನು ಗೋಧಿ, ಹತ್ತಿ, ಇತ್ಯಾದಿಗಳಿಗೆ ಒಂದೊಂದು ವಾಯುಗುಣಬೇಕು.

ಸಸ್ಯವರ್ಗದಂತೆ ಪ್ರಾಣಿವರ್ಗದಲ್ಲಿಯೂ ವಿವಿಧತೆಯಿದೆ. ದಟ್ಟ ಕಾಡುಗಳಲ್ಲಿ ಆನೆ, ಸಿಂಹ ಇತ್ಯಾದಿಗಳು, ಮೈದಾನಗಳಲ್ಲಿ ಬಾಳಲಾರವು. ಶೀತವಲಯದಲ್ಲಿ ಹಿಮಸಾರಂಗ, ಹಿಮಕರಡಿ ಇತ್ಯಾದಿಗಳು; ಬೇರೆಲ್ಲೂ ಬದುಕಲಾರವು. ಕಾಡುಪ್ರಾಣಿಗಳಂತೆ ಸಾಕುಪ್ರಾಣಿಗಳೂ ಆಯಾವಾಯುಗುಣಗಳನ್ನು ಹೊಂದಿಕೊಂಡಿವೆ. ಹಾಗೆ ಮಾನವ ಜೀವನವೂ ವಾಯುಗುಣ ಸಸ್ಯವರ್ಗ, ಪ್ರಾಣಿವರ್ಗಗಳನ್ನು ಅನುಸರಿಸಿಕೊಂಡಿದೆ.

ಇ) I 1) ಒಂದು ಪ್ರದೇಶದ ಮೇಲ್ಮೈಲಕ್ಷಣ, ಸಮುದ್ರಮಟ್ಟ ದಿಂದ ಎತ್ತರ, ಹಾಗೂ ದೂರ, ಅಲ್ಲಿ ಹಬ್ಬಿರುವ ಪರ್ವತಗಳ ಸಾಲು, ಗಾಳಿ, ಬೀಸುವ ದಿಕ್ಕು, ಸಮುದ್ರಪ್ರವಾಹಗಳು-ಇವು ವಾಯುಗುಣವನ್ನು ನಿರ್ಧರಿಸತಕ್ಕ ಅಂಶಗಳು

2) ಮೆಡಿಟರೇನಿಯನ್ ವಾಯುಗುಣ ಪ್ರದೇಶಗಳು, ಸಮಶೀತೋಷ್ಣ ವಲಯದ ಹುಲ್ಲುಗಾವಲುಗಳು, ಸಮಶೀತೋಷ್ಣವಲಯದ ಕಾಡುಪ್ರದೇಶಗಳು. ಮರುಭೂಮಿಗಳು.

II 1) ಮಾನವನು ಅತ್ಯಧಿಕ ಉಷ್ಣಪ್ರದೇಶದಲ್ಲಿ ಶ್ರಮವಹಿಸಿ ಕೆಲಸಮಾಡಲಾರ, ಅಂತೆ ಅತ್ಯಧಿಕ ಶೀತ ಪ್ರದೇಶದಲ್ಲಿದ್ದರೆ ಅವನ ಜೀವನಕ್ಕೆ ಬೇಕಾದ ಸುಖಸೌಕರ್ಯಗಳೇ ಕಡಿಮೆ. ಆದ್ದರಿಂದ ಸಮಶೀತೋಷ್ಣವಲಯದಲ್ಲಿ ಹಿತಕರವಾದ ವಾಯುಗುಣವೂ ನಾಗರಿಕತೆಗೆ ಬೇಕಾದ ಸೌಲಭ್ಯಗಳೂ ಇರುವುದರಿಂದ ಅಲ್ಲಿನ ಜನಜೀವನ ಚುರುಕಾಗಿರುತ್ತದೆ.

2) ಹಿಮಕರಡಿ, ಹಿಮಸಾರಂಗಗಳಿಗೆ ಶೀತವಲಯದ ವಾಯುಗುಣಕ್ಕೊಪ್ಪುವ ಸಂರಕ್ಷಕ ಬಣ್ಣವೂ ದಟ್ಟವಾದ ನಯವಾದ ತುಪ್ಪಟವೂ ಇರುತ್ತವೆ. ಹೀಗಾಗಿ ಶೀತವಲಯದಲ್ಲಿ ಮಾತ್ರ ಜೀವಿಸಬಲ್ಲವು.

3) ಸಮಭಾಜಕ ವೃತ್ತವು ವಿಷುವದ್ರೇಖೆಯಲ್ಲಿದೆ. ಸೂರ್ಯಕಿರಣಗಳು ಇಡಿವರ್ಷ ನೇರಾಗಿ ಬೀಳುತ್ತವೆ. ಆದ್ದರಿಂದ ಈ ವೃತ್ತದಬಳಿ ಅತ್ಯಧಿಕ ಉಷ್ಣವಿದೆ.

III ಮೈಸೂರು ರಾಜ್ಯದಲ್ಲಿ ಹೆಚ್ಚು ಮಳೆಬೀಳುವ ಪ್ರದೇಶ-ಪಶ್ಚಿಮ ಘಟ್ಟಗಳು. ಮುಖ್ಯವಾಗಿ ಆಗುಂಬೆಯಲ್ಲಿ

**ಉ) 1 ಹೊಂದಿಸಿ ಬರೆಯಲಾಗಿದೆ** 1) ನಾಗರಿಕತೆಯಲ್ಲಿ ಮುಂದರಿದ ಪ್ರದೇಶ — (ಮೆಡಿಟರೇನಿಯನ್ ಪ್ರದೇಶ 2) ಭೌಗೋಳಿಕ (ದೃಷ್ಟಿಯಿಂದ ಮಹತ್ವವಿಲ್ಲದ ಪ್ರದೇಶ-) ಶೀತಪ್ರದೇಶ 3) ಜೀವನವನ್ನು ರೂಪಿಸಲ್ಪಡುವುದು—ಪ್ರದೇಶಗಳ ಮೇಲ್ಮೈಲಕ್ಷಣ 4) ಜನವಸತಿಯೇ ಇಲ್ಲದ ಪ್ರದೇಶ—(ದಕ್ಷಿಣಧ್ರುವಪ್ರದೇಶ.)

## 25 ಸದಾ ಹಸುರುಕಾಡು ಪ್ರದೇಶಗಳು

ಅ) ಸ್ಥಾನ:— ಈ ಪ್ರದೇಶವು ಸಮಭಾಜಕವೃತ್ತದ ಉತ್ತರ ಹಾಗೂ ದಕ್ಷಿಣಕ್ಕೆ ಸುಮಾರು 500 ಕಿ. ಮೀ. ದೂರದವರೆಗೆ – ದಕ್ಷಿಣ ಅಮೇರಿಕದ ಅಮೆಜಾನ್ ನದೀಪ್ರದೇಶದಲ್ಲಿ ಮತ್ತು ಕಾಂಗೋ ನದೀಪ್ರದೇಶದಲ್ಲಿ

ಸಸ್ಯಗಳೂ ಪ್ರಾಣಿಗಳೂ:- ಇಲ್ಲಿ ಮರಗಳೂ ಬಳ್ಳಿಗಳೂ ದಟ್ಟವಾಗಿ ಹಬ್ಬಿರುತ್ತವೆ. ಮರಗಳು–ಎಬೊನಿ, ಮಹಾಗನಿ, ರೋಸ್‌ಉಡ್, ರಬ್ಬರ್ ಮುಂತಾದುವು. ಪ್ರಾಣಿಗಳು—ಮರಗಳಲ್ಲಿ ಕೋತಿ, ಪಕ್ಷಿ, ಹಲ್ಲಿ, ಹುಳ, ಚಿಟ್ಟೆ ಇತ್ಯಾದಿ, ನೆಲದಲ್ಲಿ-ಆನೆ, ಚಿರತೆ, ಖಡ್ಗಮೃಗ, ಸರ್ಪ ಇತ್ಯಾದಿ. ನೀರಿನಲ್ಲಿ– ನೀರಾನೆ, ಮೊಸಳೆ, ಆನೆ ಇತ್ಯಾದಿ

ಜನಜೀವನ:— ಅಮೆಜಾನ್ ನದೀಪ್ರದೇಶದ ಕಾಡುಗಳಲ್ಲಿ ಅಮೇರಿಕನ್ ಇಂಡಿಯನರು ಇರುವರು. ಉದ್ಯೋಗ–ಬೇಟೆಯಾಡುವುದು, ಮೀನು ಹಿಡಿಯುವುದು. ಕಾಂಗೋನದಿ ಪ್ರದೇಶದಕಾಡುಗಳಲ್ಲಿ ಜನವಸತಿ ವಿರಳ. ಇದ್ದವರು ಕಪ್ಪಾದ ನೀಗ್ರೊ, ಬುಷ್‌ಮೆನ್, ಪಿಗ್ಮಿ ಮೊದಲಾದವರು. ಅಲೆದಾಡಿ, ಬೇಟೆಯಾಡಿ ಜೀವಿಸುವರು. ಬೇಸಾಯಗಾರರು ಬಾಳೆಹಣ್ಣು, ಬೀನ್ಸ್, ಮೊದಲಾದುವನ್ನು ಬೆಳಸುವರು. ಈ ಪ್ರದೇಶಕ್ಕೆಸೇರಿದ ಮಲಯಾ, ಇಂಡೋನೇಷ್ಯಾ, ನ್ಯೂಗಿನಿ ಮೊದಲಾದೆಡೆಗಳಲ್ಲಿ ರಬ್ಬರ್. ಟಿ, ಕಾಫಿ, ತಂಬಾಕು, ಭತ್ತ, ಕಬ್ಬು, ತೆಂಗು ಬೆಳಸುತ್ತಾರೆ. ಪಟ್ಟಣಗಳು—ಎಮೆಜಾನ್ ನದೀತೀರದಲ್ಲಿ ಮನವೋಸ್ ಪಟ್ಟಣ, ಕಾಂಗೋ ತೀರದಲ್ಲಿ ಮಟಡಿ, ಲಿಯೋಪಾಲ್ಡ್, ಸ್ಟಾನಿವಿಲ್

ಇ) I 1) ಇಲ್ಲಿ ಉಷ್ಣಾಂಶ 30—38 ಸೆಂ. ಡಿಗ್ರಿಗಳಷ್ಟಿದೆ. ಸೂರ್ಯಕಿರಣಗಳು ನೇರಾಗಿ ಬೀಳುವುದರಿಂದ ನೀರು ಆವಿಯಾಗಿ ಇಡಿ ವರ್ಷ ಮಳೆಬೀಳುತ್ತದೆ. ಸಾಕಷ್ಟು ನೀರಿನ ಪೂರೈಕೆಯೂ, ಉಷ್ಣತೆಯೂ ಇರುವುದರಿಂದ ಈ ಕಾಡುಗಳು ಸದಾ ಹಸುರಾಗಿರುತ್ತವೆ.

2) ರಬ್ಬರ್, ಕೊಕ್ಕೊ, ಕ್ವಿನಿನ್ (ಸಿಂಕೋನಾ) ಮತ್ತು ಎಬೊನಿ, ಮಹಾಗನಿ, ರೋಸ್‌ವುಡ್ ಮೊದಲಾದ ಮರಗಳು ಇಲ್ಲಿನ ಉತ್ಪನ್ನಗಳು

3) ಅಮೇಜಾನ್ ನದೀಪ್ರದೇಶದ ಜನರು ಕುಳ್ಳರಾದ ಅಮೇರಿಕನ್ ಇಂಡಿಯನರು. ಬಿಲ್ಲುಬಾಣಗಳೇ ಇವರ ಆಯುಧಗಳು. ಗುಡಿಸಲುಗಳಲ್ಲಿ ಅಥವಾ ಮರಗಳಲ್ಲಿ ಕಟ್ಟಿದ ಮನೆಗಳಲ್ಲಿ ವಾಸಿಸುವರು. ಆಗಾಗ ಅಲೆದಾಡಿ, ಬೇಟೆಯಾಡಿ ಜೀವಿಸುತ್ತಾರೆ. ಆಹಾರ—ಪ್ರಾಣಿಗಳ ಮಾಂಸ, ಮೀನು, ಹಣ್ಣುಗಳು, ಗೆಡ್ಡೆಗೆಣಸುಗಳು. ಉದ್ಯೋಗ-ಬೇಟೆ, ಮೀನು ಹಿಡಿಯುವುದು ಕಾಡುತ್ಪನ್ನಗಳ ಮಾರಾಟ, ಅಲ್ಪಸ್ವಲ್ಪ ಬೇಸಾಯಮಾಡುವುದು.

II ದಕ್ಷಿಣ ಅಮೇರಿಕದ ಅಮೇಜಾನ್ ನದಿಯ ಬಯಲು ಆಫ್ರಿಕದ ಗಿನಿಕರಾವಳಿ, ಕಾಂಗೋನದಿಯ ಬಯಲು, ಏಷ್ಯಾದ ಮಲಯ, ಇಂಡೋನೇಷ್ಯಾ, ನ್ಯೂಗಿನಿ ಮತ್ತು ನೂರಾರು ದ್ವೀಪಗಳು, ಇವುಗಳಲ್ಲಿ ಸಮಭಾಜಕ ವೃತ್ತಪ್ರದೇಶದ ವಾಯುಗುಣವಿದೆ.

III 1) ಕಾಂಗೋನದಿ – ಆಫ್ರಿಕಾಖಂಡ 3) ಮಲಯ – ಏಷ್ಯಾ ಖಂಡ 4) ಅಮೆಜಾನ್ ನದಿ–ದಕ್ಷಿಣ ಅಮೇರಿಕ

**ಉ) ತುಂಬತಕ್ಕ ಶಬ್ದಗಳು ಆವರಣದಲ್ಲಿವೆ.** 1) ಪ್ಯಾರಬಂದರದ ಮೂಲಕ – ನ್ಯೂ – ನ್ಯೂ ರಫ್ತು ಮಾಡುತ್ತಾರೆ. (ರಬ್ಬರ್, ಮರದ ದಿಮ್ಮಿಗಳು 2) – ಮತ್ತು – ಪ್ರದೇಶಗಳಲ್ಲಿ ರಬ್ಬರ್ ಉತ್ಪನ್ನ ಕಡಿಮೆ ಯಾಗಿದೆ. (ಅಮೆಜಾನ್ ನದಿ, ಕಾಂಗೋ ನದಿ, 3) — ಪ್ರದೇಶದಲ್ಲಿ ವರ್ಷಕ್ಕೆ 200ರಿಂದ 300 ಮೀಟರುಗಳಷ್ಟು ಮಳೆ ಬರುತ್ತದೆ. (ಸಮಾಜಕವೃತ್ತ)

## ಮಾನ್‌ಸೂನ್ ಪ್ರದೇಶಗಳು

ಅ) ನಮ್ಮ ಭಾರತವು ಈ ಪ್ರದೇಶದಲ್ಲಿದೆ. ಇಲ್ಲಿ ಬೇಸಗೆಕಾಲ ಸು. 30 ಸೆಂ. ಕೆಲವೇಳೆ 38 ಸೆಂ. ಡಿಗ್ರಿಗಳಷ್ಟು. ಚಳಿಗಾಲ 26 ಸೆ. ಡಿಗ್ರಿಗಳಷ್ಟು ಉಷ್ಣಾಂಶವಿದೆ. ಇದರಿಂದ ಗಾಳಿಯ ಒತ್ತಡದಲ್ಲಿ ವ್ಯತ್ಯಾಸವಾಗಿ ಗೊತ್ತಾದ ಕಾಲದಲ್ಲಿ ಗಾಳಿ ಬೀಸುತ್ತದೆ. ಈ ಕಾರಣ ವಿವಿಧ ಭಾಗಗಳಲ್ಲಿ ಸಾಮಾನ್ಯ 50ರಿಂದ 500 ಸೆ. ಮೀಟರ್ ಮಳೆ ಸುರಿಯುತ್ತದೆ.

**ಸಸ್ಯಗಳೂ–ಪ್ರಾಣಿಗಳೂ:—** ಹೆಚ್ಚು ಮಳೆ ಬೀಳುವಲ್ಲಿ ದಟ್ಟ ಕಾಡುಗಳಿವೆ. ಸಾಲ, ಬೀಟೆ, ದೇವದಾರು, ಪೀತದಾರು, ತೇಗು,

ಬಿದಿರುಗಳು ಬೆಳೆಯುತ್ತವೆ. ಮಳೆ ಕಡಿಮೆಯಿದ್ದಲ್ಲಿ ಕುರುಚಲು ಗಿಡಗಳಿವೆ. ತೀರದಲ್ಲಿ ತೆಂಗು ವಿಶೇಷವಾಗಿ ಬೆಳೆಯುವುದು. ಕಾಡುಗಳಲ್ಲಿ ಸಿಂಹ, ಹುಲಿ, ಆನೆ, ಚಿರತೆ, ಕೋತಿ ಮೊದಲಾದುವೂ ನಾಡುಗಳಲ್ಲಿ ಎತ್ತು, ಕೋಣ, ಎಮ್ಮೆ, ದನ, ಕತ್ತೆ ಮೊದಲಾದುವೂ ಇವೆ.

**ಜನಸಾಂದ್ರತೆ:—** ಈ ಪ್ರದೇಶದಲ್ಲಿ ಹೆಚ್ಚು. **ಜನಜೀವನ**-ಮುಖ್ಯ ಉದ್ಯೋಗ ಬೇಸಾಯ. **ಉತ್ಪನ್ನಗಳು:—** ಗದ್ದೆಗಳಲ್ಲಿ ಭತ್ತ, ಕಬ್ಬು, ಸಣಬು (ಜವುಗಿನಲ್ಲಿ) ಹೊಲಗಳಲ್ಲಿ-ರಾಗಿ, ಜೋಳ, ನವಣೆ, ಗೋಧಿ ಸಾವೆ, ಹೊಗೆಸೊಪ್ಪು, ಹತ್ತಿ ಎಣ್ಣೆಕಾಳು ದ್ವಿದಳ ಧಾನ್ಯಗಳು, ತೋಟಗಳಲ್ಲಿ ಕಾಫಿ, ಟೀ, ರಬ್ಬರು, ಹಣ್ಣುಗಳು ಮುಖ್ಯ. ವಿಶ್ರಾಂತಿ ಕಾಲದಲ್ಲಿ ಗುಡಿ ಗಾರಿಕೆ, ತೀರದಲ್ಲಿ ಮೀನುಗಾರಿಕೆ.

**ಇ) I** (1) ಭಾರತ, ಪಾಕಿಸ್ಥಾನ, ಬರ್ಮಾ, ನೇಪಾಳ, ಸಿಲೋನ್ ದಕ್ಷಿಣ ಚೀನ, ಫಿಲಿಫೈನ್ಸ್ ದ್ವೀಪಗಳು, ಆಸ್ಟ್ರೇಲಿಯಾದ ವಾಯುವ್ಯ ಭಾಗ ವೆಸ್ಟ್ಇಂಡೀಸ್ ದ್ವೀಪಗಳು, ಆಗ್ನೇಯ ಬ್ರೆಜಿಲ್, ಫ್ಲಾರಿಡಾ, ಪೂರ್ವ ಮೆಕ್ಸಿಕೊ, ಆಗ್ನೇಯ ಆಫ್ರಿಕ, ಮಡಗಾಸ್ಕರ್, ಗಯಾನಾ ತಪ್ಪಲು ಇವು ಮಾನ್‌ಸೂನ್ ಪ್ರದೇಶಗಳು.

2) ಈ ಪ್ರದೇಶದಲ್ಲಿನ ಉಷ್ಣಾಂಶದಲ್ಲಿ ವ್ಯತ್ಯಾಸವಿರುವುದರಿಂದ ಗಾಳಿಯ ಒತ್ತಡವೂ ವ್ಯತ್ಯಾಸವಾಗುತ್ತದೆ. ಆದ್ದರಿಂದ ಗಾಳಿಯು ಕಾಲಭೇದ ವನ್ನನುಸರಿಸಿ ಗೊತ್ತಾದ ಕಾಲದಲ್ಲಿಯೇ ಬೀಸುತ್ತದೆ. ಹೀಗಾಗಿ ನಿಯತ ಕಾಲಿಕ ಮಾರುತಗಳೆನ್ನುತ್ತಾರೆ.

3) ಇಲ್ಲಿ ನಿಯತಕಾಲಿಕ ಮಾರುತಗಳಿಂದ ಸಾಕಷ್ಟು ಮಳೆ ಬೀಳು ತ್ತದೆ. ವಾಯುಗುಣ ಹಿತಕರ, ಮಣ್ಣು ಫಲವತ್ತಾಗಿದೆ. ಹೆಚ್ಚಿನವರಿಗೆ ವ್ಯವಸಾಯವೇ ಮುಖ್ಯೋದ್ಯೋಗ. ಆಹಾರಾಭಾವವು ಇಲ್ಲಿರುವುದಿಲ್ಲ. ಗದ್ದೆಗಳಲ್ಲಿ ಭತ್ತ ಇತ್ಯಾದಿ, ಹೊಲಗಳಲ್ಲಿ ನಾನಾ ಧಾನ್ಯಗಳು, ತೋಟಗಳಲ್ಲಿ ಟೀ ಮೊದಲಾದುವು ಬೆಳೆಯುತ್ತವೆ. ಕಾಡುತ್ಪನ್ನಗಳೂ ಇವೆ. ಹೀಗಾಗಿ ಮಾನ್‌ಸೂನ್ ಪ್ರದೇಶದಲ್ಲಿ ಜನಸಾಂದ್ರತೆ ಹೆಚ್ಚು.

4) ಹೆಚ್ಚು ಮಳೆ ಬೀಳುವುದು—ಪಶ್ಚಿಮಘಟ್ಟ ಪ್ರದೇಶಗಳಲ್ಲಿ. ಆಗುಂಬೆಯಲ್ಲಿ ಸು. 760 ಸೆಂ. ಮೀಟರ್.

II (1) ಮುಂಗಾರು, ಹಿಂಗಾರು. 2) ಕಾಫಿ 3) ಕಬ್ಬು ಮತ್ತು ಹೊಗೆಸೊಪ್ಪು 4) ಕೊಕೋವು.

III ಮುಂಗಾರು ಮಳೆ, ಜೂನ್ ತಿಂಗಳಿಂದ ಸಪ್ಟಂಬರ್ ವರೆಗೆ ಹಿಂಗಾರು ಮಳೆ, ಅಕ್ಟೋಬರದಿಂದ—ಜನವರಿ ವರೆಗೆ.

ಉ) ಬೆಳೆಗಳೂ - ದೇಶಗಳೂ:— 1) **ಭತ್ತ** - ಭಾರತ, ಪಾಕಿಸ್ಥಾನ, ಬರ್ಮಾ, ಇಂಡೋಚೈನಾ, ಥ್ಯಾಲೆಂಡ್. 2) **ಕಬ್ಬು** - ಭಾರತ, ವೆಸ್ಟ್ ಇಂಡೀಸ್, ಉತ್ತರ ಆಸ್ಟ್ರೇಲಿಯಾ, ಟ್ಯಾಂಗನೀಕ, ಕೀನ್ಯಾ, ಮೊಸಾಂಬಿಕ್ 3) **ಅನನಾಸು, ಬಾಳೆಹಣ್ಣು** - ಉತ್ತರ ಆಸ್ಟ್ರೇಲಿಯಾ 4) **ಹತ್ತಿ, ಕಿತ್ತಳೆಹಣ್ಣು, ನಾರು** - ಭಾರತ, ಕೀನ್ಯಾ, ಮೊಸಾಂಬಿಕ್, ಟಾಂಗನೀಕ.

## 27 ಉಷ್ಣವಲಯದ ಹುಲ್ಲುಗಾವಲುಗಳು

ಅ) ಈ ಪ್ರದೇಶಗಳು ಸದಾ ಹಸುರು ಕಾಡುಗಳ ಉತ್ತರಕ್ಕೂ ದಕ್ಷಿಣಕ್ಕೂ ಇವೆ. ಉಷ್ಣಾಂಶ 32ರಿಂದ 38 ಸೆ. ಡಿಗ್ರಿಗಳಷ್ಟು. ಮಳೆಯು ಸರಾಸರಿ 50 ಸೆ. ಮೀಟರುಗಳು. ಹೀಗಾಗಿ ದಟ್ಟವಾದ ಹುಲ್ಲುಗಾವಲುಗಳು ಅವುಗಳ ನಡುವೆ ಗಿಡಮರಗಳು ಗುಂಪಾಗಿ ಬೆಳೆಯುತ್ತವೆ. **ಪ್ರಾಣಿಗಳು**— ಜಿಂಕೆ, ಜಿರಾಫೆ, ಜೀಬ್ರ. ಕಾಂಗರು, ಸಾರಂಗ, ಪಕ್ಷಿ ಇತ್ಯಾದಿ ಸಾಧು ಜೀವಿಗಳೂ ಅವನ್ನು ತಿಂದು ಬದುಕುವ ಹುಲಿ, ಚಿರತೆ, ಕರಡಿ, ಸಿಂಹ (ಮುಖ್ಯ) ಇತ್ಯಾದಿ ಕ್ರೂರ ಪ್ರಾಣಿಗಳು ಇವೆ.

**ಜನಜೀವನ:**— ಈ ಪ್ರದೇಶವು ಪ್ರಾಣಿಗಳ ಬೇಟೆಗೆ ಹೆಸರು ಪಟ್ಟಿದೆ. ಅಂಟು, ಜೇನು, ತುಪ್ಪ, ರಬ್ಬರನ್ನು ಸಂಗ್ರಹಿಸಿ ಮಾರಾಟ ಮಾಡುವರು. ಆದರೆ ಲ್ಯಾನೋಸಿನಲ್ಲಿ ಜನವಸತಿ ಕಡಿಮೆ. ಕ್ಯಾಂಪೋಸಿನಲ್ಲಿ ಜನವಸತಿ ಯಿದ್ದರೂ ಸಂಚಾರ ಸೌಕರ್ಯಗಳು ಕಡಿಮೆ. ಆಫ್ರಿಕದ ಸೆವನ್ನಾದಲ್ಲಿ

ಹಾಲು ಮಾಂಸಗಳ ಉತ್ಪತ್ತಿಗಳಿಗಾಗಿ ಕುರಿ ದನ ಆಡುಗಳನ್ನು ಸಾಕುವರು. ಇತ್ತೀಚಿಗೆ ನೀರಾವರಿಯ ಸಹಾಯ ಪಡೆದು ವ್ಯವಸಾಯ ನಡೆಸುವರು. ಉತ್ಪನ್ನಗಳು (ಆಫ್ರಿಕದಲ್ಲಿ) – ಹತ್ತಿ, ನೀಲಿಗಿಡ, ಎಣ್ಣೆಕಾಳುಗಳು, ಮೆಕ್ಕೆ ಜೋಳ, ಭತ್ತ, ಹೊಗೆಸೊಪ್ಪು, ದ್ವಿದಳ ಧಾನ್ಯಗಳು. ರಫ್ತುಗಳು— ಹಾಲು, ಮಾಂಸ, ಚರ್ಮಗಳು.

ಇ) I (1) ದಕ್ಷಿಣ ಅಮೇರಿಕ ಖಂಡದಲ್ಲಿ (ಲ್ಯಾನಾಸ್, ಕ್ಯಾಂಪೋಸ್) ಯೂ ಆಫ್ರಿಕಖಂಡದಲ್ಲಿ (ಸವನ್ನಾ) ಯೂ ಆಸ್ಟ್ರೇಲಿಯಾ ಖಂಡದಲ್ಲಿಯೂ ಉಷ್ಣವಲಯದ ಹುಲ್ಲುಗಾವಲುಗಳು ವಿಶಾಲವಾಗಿ ಹಬ್ಬಿರುತ್ತವೆ.

2) ದಕ್ಷಿಣ ಅಮೇರಿಕದ ಈ ಪ್ರದೇಶಗಳಲ್ಲಿ ಜನವಸತಿಗೆ ಸಾನುಕೂಲ ವಿಲ್ಲ. ಅಲ್ಲಿ ಬೇಟೆಯೇ ಮುಖ್ಯ. ಆಫ್ರಿಕದ ಸವನ್ನಾ ಜನರ ಮುಖ್ಯ ವೃತ್ತಿ – ದನಕರು, ಆಡುಕುರಿಗಳ ಸಾಕಣೆ ಮತ್ತು ವ್ಯವಸಾಯ. (ಸೂಡಾನ್, ನೈಜೀರಿಯಾ, ರೊಡೇಶಿಯಾ, ಅಂಗೋಲಾ, ದಕ್ಷಿಣ ಕಾಂಗೋ ಪ್ರದೇಶಗಳಲ್ಲಿ ವ್ಯವಸಾಯವೇ ಮುಖ್ಯ) ಆಸ್ಟ್ರೇಲಿಯಾದಲ್ಲಿ ಪಶುಪಾಲನೆ, ಮಾಂಸ ತಯಾರಿಕೆ.

II ಸೇರಿಸತಕ್ಕ ಪದಗಳು 1) ಸವನ್ನಾ 2) ಲಾನಾಸ್, ಕ್ಯಾಂಪೊಸ್ 3) ಪಶುಪಾಲನೆ,

III ಕಾಂಗರು ತೀಕ್ಷ್ಣಸ್ವಭಾವದ ಸಸ್ಯಾಹಾರಿ ಪ್ರಾಣಿ- ನೋಟಕ್ಕೆ ಜಿಂಕೆಯಂತಿದೆ. ಇದರ ಮುಂಗಾಲುಗಳು ಚಿಕ್ಕವು, ಹಿಂಗಾಲುಗಳು ಉದ್ದವಾಗಿ ಗಾಳಿಯಂತೆ ನೆಗೆದು ಓಡಬಲ್ಲುದು. ಮರಿಯನ್ನು ಬಸುರು ಚೀಲದಲ್ಲಿಟ್ಟುಕೊಂಡು ಅಲೆದಾಡುತ್ತಿರುವುದು.

## 28 ಮೆಡಿಟರೇನಿಯನ್ ವಾಯುಗುಣ ಪ್ರದೇಶಗಳು

ಅ) ಈ ಪ್ರದೇಶಗಳು ಭೂಮಧ್ಯ ಸಮುದ್ರದ ಸುತ್ತಲೂ ಇರುವ

ದೇಶಗಳಲ್ಲಿ, ಸಾಮಾನ್ಯವಾಗಿ ಖಂಡಗಳ ಪಶ್ಚಿಮ ಭಾಗದಲ್ಲಿ ಕಂಡುಬರುತ್ತವೆ. ಇಲ್ಲಿನ ಉಷ್ಣಾಂಶ ಬೇಸಗೆಯಲ್ಲಿ 38 ಸೆಂ. ಡಿಗ್ರಿಗಳಷ್ಟು. ಚಳಿಗಾಲದಲ್ಲಿ 32 ಸೆಂ. ಡಿಗ್ರಿಗಳಷ್ಟಿದೆ. ಸಸ್ಯವರ್ಗಗಳು:-ಆಲಿವ್, ಓಕ್, ಯುಕಲಿಪ್ಟಸ್ ಮುಂತಾದ ಮರಗಳು. ದ್ರಾಕ್ಷಿ, ಸೇಬು, ಕಿತ್ತಳೆ, ಪೇರಳೆ, ಅಂಜೂರ, ಬಾದಾಮಿ, ನಿಂಬೆ, ಇತ್ಯಾದಿ ಹಣ್ಣಿನ ಗಿಡಗಳು, ಗೋಧಿ, ಬಾರ್ಲಿ, ಮೆಕ್ಕೆಜೋಳ ಇತ್ಯಾದಿ ಧಾನ್ಯಗಳು ಬೆಳೆಯುತ್ತವೆ.

ಜನರು–ನಾಗರಿಕತೆಯಲ್ಲಿ ಮುಂದರಿದವರು, ಕಲಾಪ್ರಿಯರು, ಉದ್ಯೋಗಗಳು–ತೋಟಗಾರಿಕೆ, ವ್ಯವಸಾಯ, ಕುರಿದನ, ರೇಶ್ಮೆಹುಳಗಳ ಸಾಕಣೆ. ರಫ್ತುಗಳು - ಮುಖ್ಯವಾಗಿ ಪಾನೀಯಗಳು, ಡಬ್ಬಿಗಟ್ಟಿಳೆ ಹಣ್ಣುಗಳು.

ಇ I (1) ಈ ವಾಯುಗುಣವು ಮೆಡಿಟರೇನಿಯನ್ ಸಮುದ್ರದ ಸುತ್ತಲೂ ಇರುವ ದೇಶಗಳಲ್ಲಿ ಕಾಣಲ್ಪಡುತ್ತದೆ. ಸಾಮಾನ್ಯ ಖಂಡಗಳ ಪಶ್ಚಿಮ ತೀರದಲ್ಲೂ ಇರುತ್ತದೆ. ಹೀಗಾಗಿ ಮೆಡಿಟರೇನಿಯನ್ ವಾಯುಗುಣವೆನ್ನುವರು.

2) ಇಲ್ಲಿನ ಉಷ್ಣಾಂಶ ಬೇಸಗೆ ಸುಮಾರು 38 ಸೆಂ. ಡಿಗ್ರಿಯಷ್ಟಿದ್ದರೆ ಚಳಿಗಾಲ 32 ಸೆಂ. ಡಿಗ್ರಿಗಳಷ್ಟು ಇಳಿಯುತ್ತದೆ. ಆದ್ದರಿಂದ ಬೇಸಗೆಕಾಲ ಚೆನ್ನಾದ ಸೆಕೆ - ಬಿಸಿಲು ಇದೆ. ಮಳೆಯಿಲ್ಲ. ಚಳಿಗಾಲ ಮಾತ್ರ ಮಳೆ ಬರುತ್ತದೆ. ವಿಶೇಶ ತಂಪಿರುವುದಿಲ್ಲ. ಹಿತವಾದ ಹವೆಯಿರುವುದು. ಇವೇ ಮೆಡಿಟರೇನಿಯನ್ ವಾಯುಗುಣದ ಲಕ್ಷಣಗಳು.

3) ಜನರ ಮುಖ್ಯೋದ್ಯೋಗ ತೋಟಗಾರಿಕೆ:- ಬಾರ್ಲಿ ಮತ್ತು ದ್ರಾಕ್ಷಿ ಹಣ್ಣುಗಳಿಂದ ಮದ್ಯ ತಯಾರಿಸುವುದು. ಹಣ್ಣುಗಳನ್ನೊಣಗಿಸಿ ಡಬ್ಬಿಗಳಲ್ಲಿ ತುಂಬಿ ರವಾನಿಸುವುದು, ಆಲಿವ್ ಎಣ್ಣೆ ತೆಗೆಯುವುದು, ಮೇಣದ ಬತ್ತಿ ತಯಾರಿಸುವುದು. 2) ಕುರಿದನಗಳನ್ನೂ ರೇಶ್ಮೆಹುಳಗಳನ್ನೂ ಸಾಕುವುದು. 3) ಕೆಲವುಕಡೆ ಗೋಧಿ, ಮೆಕ್ಕೆಜೋಳಗಳ ಬೇಸಾಯ ನಡೆಸುವುದು.

II (1) ಅಲ್ಲಿ ಬೇಸಗೆ ಮಳೆಯಿಲ್ಲ. ಸೆಕೆ ಹೆಚ್ಚು. ಚಳಿಗಾಲದಲ್ಲಿ ಮಾತ್ರ ಮಳೆಯಿದೆ. ಆದ್ದರಿಂದ ಆ ಪ್ರದೇಶದ ಗಿಡಮರಗಳು ತಮಗೆ ಬೇಕಾದ ತೇವಾಂಶವನ್ನುಳಿಸಿಕೊಳ್ಳಲು ದಪ್ಪವಾದ ತೊಗಟೆಗಳನ್ನು ಬೆಳಸಿ ಕೊಳ್ಳುತ್ತವೆ.

2) ಅಲ್ಲಿ ಚಳಿಗಾಲದಲ್ಲಿ ಮಳೆಯಿದೆ. ಬೇಸಗೆಯಲ್ಲಿ ಸೆಕೆಯೂ ಬಿಸಿಲೂ ಹೆಚ್ಚು. ಇಂತಹ ವಾಯುಗುಣವು ಹಣ್ಣುಗಳ ಬೆಳವಣಿಗೆಗೆ ಅನು ಕೂಲವಾಗಿದೆ.

3) ಈ ಪ್ರದೇಶದಲ್ಲಿ ನಾಗರಿಕತೆಯ ಪ್ರಗತಿಗೆ ಹಿತಕರವಾದ ವಾಯು ಗುಣವಿದ್ದು ಹೆಚ್ಚು ಶ್ರಮವಿಲ್ಲದೆಯೆ ಜೀವನ ನಡೆಸಬಹುದು. ಆದುದರಿಂದ ತೋಟಗಾರಿಕೆ, ಅದರ ಜೊತೆಗೆ ವ್ಯವಸಾಯ, ಕುರಿದನಗಳ ಸಾಕಣೆ ಮೊದ ಲಾದ ಉದ್ಯೋಗಗಳು ನಡೆಯುತ್ತವೆ. ಹೀಗಾಗಿ ಮೆಡಿಟರೇನಿಯನ್ ಪ್ರದೇಶದಲ್ಲಿ ಜನಸಾಂದ್ರತೆ ಹೆಚ್ಚು.

III ಯುರೋಪ್ ಖಂಡದಲ್ಲಿ – ದಕ್ಷಿಣ ಫ್ರಾನ್ಸ್, ಸ್ಪೈನ್, ಇಟಲಿ ಪೋರ್ಚುಗಲ್, ಗ್ರೀಸ್, ಪಶ್ಚಿಮ ಟರ್ಕಿದೇಶಗಳು, ಆಫ್ರಿಕದಲ್ಲಿ ಉತ್ತರಕ್ಕೆ ಆಲ್ಜೀರಿಯಾ, ಮೊರಕ್ಕೊ, ಟ್ಯುನಿಸಿಯಾ, ಮತ್ತು ನೈಋತ್ಯ ಮೂಲೆಯ ದೇಶಗಳು, ಆಸ್ಟ್ರೇಲಿಯಾದಲ್ಲಿ - ನೈಋತ್ಯ ಮತ್ತು ದಕ್ಷಿಣಭಾಗ, ಟಾಸ್ಮೇ ನಿಯಾ, ನ್ಯೂಸಿಲೇಂಡಿನ ಉತ್ತರ ದ್ವೀಪ, ಉತ್ತರ ಅಮೇರಿಕದಲ್ಲಿ - ಮಧ್ಯ ಕ್ಯಾಲಿಫೋರ್ನಿಯಾ ದಕ್ಷಿಣ ಅಮೇರಿಕದಲ್ಲಿ ಮಧ್ಯಚಿಲಿ. ಇವುಗಳಲ್ಲಿ ಮೆಡಿಟ ರೇನಿಯನ್ ವಾಯುಗುಣವು ಕಂಡುಬರುತ್ತದೆ.

ಉ) ಹೊಂದಿಸಿ ಬರೆಯಲಾಗಿದೆ:— 1) ಸಾಗುವಾನಿ - ಬರ್ಮಾ 2) ಮೆಡಿಟರೇನಿಯನ್ ಪ್ರದೇಶದ ಮುಖ್ಯ ಗಿಡ - ಕಾರ್ಕ್ 3) ಹಾಲಿವುಡ್ - ಕ್ಯಾಲಿಫೋರ್ನಿಯಾ 4) ರಬ್ಬರಿನ ಮೂಲಸ್ಥಾನ - ಬ್ರೆಜೀಲ್ 5) ಕಾಫಿ- ರಿಯೋಡಿಜನೈರೋ.

## 29 ಸಮಶೀತೋಷ್ಣವಲಯದ ಕಾಡು ಪ್ರದೇಶಗಳು.

ಅ) ಸ್ಥಾನ:— ಯುರೋಫ್ ಖಂಡದ ವಾಯುವ್ಯ ಭಾಗ, ಕೆನಡಾದ ಪಶ್ಚಿಮ ಭಾಗ, ಬ್ರಿಟಿಷ್ ಕೊಲಂಬಿಯಾ, ದಕ್ಷಿಣ ಚಿಲಿ, ಟಾಸ್ಮೇನಿಯಾ ಮತ್ತು ನ್ಯೂಸಿಲ್ಯಾಂಡಿನ ದಕ್ಷಿಣ ಭಾಗ ಇವು ಈ ಪ್ರದೇಶದಲ್ಲಿ ಸೇರುವ ಭೂಭಾಗಗಳು. ಇಲ್ಲಿನ ಉಷ್ಣಾಂಶ 22 ಸೆಂ. ಡಿಗ್ರಿಗಳಿಗಿಂತ ಹೆಚ್ಚಿಲ್ಲ.

**ಸಸ್ಯವರ್ಗಗಳೂ ಪ್ರಾಣಿವರ್ಗಗಳೂ:** – ಇಲ್ಲಿ ವರ್ಷದ ಎಲ್ಲಾ ಕಾಲಗಳಲ್ಲೂ ಮಳೆಯಾಗುತ್ತದೆ. ಹೀಗಾಗಿ ಚಳಿಗಾಲದಲ್ಲಿ ಎಲೆಯುದುರಿಸುವ ಕಾಡುಗಳಲ್ಲಿ ಗಟ್ಟಿ ಮರಗಳೂ ಮಿದು ಮರಗಳೂ ಇರುತ್ತವೆ. ಉತ್ತರಕ್ಕೆ ಹೋದಂತೆ ಸೂಚೀಪರ್ಣ ವೃಕ್ಷಗಳೂ ಕಂಡುಬರುತ್ತವೆ. ಪ್ರಾಣಿಗಳು– ಅಳಿಲು, ಮುಂಗುಸಿ, ಕರಡಿ, ಚಿರತೆ ಮುಂತಾದ ದಟ್ಟವಾದ ತುಪ್ಪಟವುಳ್ಳ ಪ್ರಾಣಿಗಳಿವೆ.

ಜನಜೀವನ:— 1) ಹಲವು ಜನರು ಮರಗಳನ್ನು ಕಡಿಯುವರು, ಕಾರ್ಖಾನೆಗೆ ಒಯ್ದು ಬೆಂಕಿಕಡ್ಡಿ ಮೊದಲಾದುವನ್ನು ತಯಾರಿಸುವರು. ಆ ಪ್ರದೇಶದಲ್ಲಿ ಕೆಲವರು ಸಂಪೂರ್ಣ ಮರಗಳಿಂದಲೇ ಮನೆಗಳನ್ನು ಕಟ್ಟುತ್ತಾರೆ. 2) ಕೆಲವರು ಮಾಂಸ-ಚರ್ಮಕ್ಕಾಗಿ ಬೇಟೆಯಾಡುತ್ತಾರೆ. 3) ಮಳೆ ಬೀಳುವ ಪ್ರದೇಶಗಳಲ್ಲಿ ಪಶುಪಾಲನೆಯೂ, ವ್ಯವಸಾಯವೂ ಅಭಿವೃದ್ಧಿ ಹೊಂದಿದೆ. 4) ಶೀತಪ್ರದೇಶಗಳಲ್ಲಿ ಮೀನುಗಾರಿಕೆಯು ಸಾಗುತ್ತಿದೆ. 5) ಇತ್ತೀಚೆಗೆ ಈ ಪ್ರದೇಶಗಳು ಕೈಗಾರಿಕೆಯಲ್ಲಿಯೂ ಪ್ರಗತಿಹೊಂದಿವೆ.

ಇ I (1) ಎಲೆಯುದುರುವ ಕಾಡುಪ್ರದೇಶಗಳಲ್ಲಿ ಓಕ್, ಎಲ್ಮ್, ಬೀಚ್, ಬರ್ಚ್, ನೇಪಲ್ ಮೊದಲಾದವು. ಉತ್ತರಕ್ಕೆ ಸೂಜಿಮೊನೆಯಂತಿರುವ ಎಲೆಗಳುಳ್ಳ ಮರಗಳು, (ಫೈನ್, ಫರ್, ದೇವದಾರು ಮೊದಲಾದುವು.

2) (1) ಈ ಕಾಡುಪ್ರದೇಶಗಳ ಜನರ ಮುಖ್ಯೋದ್ಯೋಗ– ಮರ ಕಡಿಯುವುದು. ಕಾರ್ಖಾನೆಗೆ ಒಯ್ದು ಕಾಗದ ಇತ್ಯಾದಿ ತಯಾರಿಸುವುದು.

2) ಮಾಂಸ-ಚರ್ಮಕ್ಕಾಗಿ ಬೇಟೆಯಾಡುವುದು. ಇವರು ಚರ್ಮದಿಂದ ಉದ್ದವಾದ ಅಂಗಿಗಳನ್ನು ಹೊಲಿಸಿಕೊಳ್ಳುತ್ತಾರೆ. 3) ಕೆಲವು ಕಡೆ ಕಾಡು ಕಡಿದು ವ್ಯವಸಾಯ ನಡೆಸುತ್ತಾರೆ. 4) ಹಾಲೆಂಡ್ ಮೊದಲಾದ ದೇಶದವರಿಗೆ ಪಶುಪಾಲನೆ ಹಾಗೂ ವ್ಯವಸಾಯವೂ ಮುಖ್ಯ. 5) ಕಬ್ಬಿಣ ಕಲ್ಲಿದ್ದಲು ಸಿಗುವಲ್ಲಿ ಬಗೆಬಗೆಯ ಯಂತ್ರಕೈಗಾರಿಕೆಗಳನ್ನು ನಡೆಸುತ್ತಾರೆ. 6) ನಾರ್ವೆ ಮೊದಲಾದ ಶೀತವಲಯಗಳಲ್ಲಿ ಮೀನುಗಾರಿಕೆಯೇ ಮುಖ್ಯ.

II (1) ಈ ದೇಶಗಳಲ್ಲಿ ಹೆಚ್ಚಾಗಿ ಮಳೆ ಬೀಳುವ ಮೈದಾನ ಪ್ರದೇಶಗಳಿದ್ದು ವ್ಯವಸಾಯವೂ ಪಶುಪಾಲನೆಯೂ ಅಭಿವೃದ್ಧಿಹೊಂದಿವೆ. ಹಾಗೆ ಇಲ್ಲಿನ ಬೆಣ್ಣೆ, ಗಿಣ್ಣು, ಹಾಲು, ಮಾಂಸಗಳೂ ಹೆಸರುಪಟ್ಟಿವೆ. ಹೈನವೃತ್ತಿಯು ಪರಸ್ಪರವಾಗಿ ಸಾಗುವುದರಿಂದ ಹಾಲೇಂಡ್, ಡೆನ್ಮಾರ್ಕ್ ದೇಶಗಳು ಪಶುಪಾಲನೆಗೆ ಪ್ರಸಿದ್ಧಿಪಡೆದಿವೆ.

2) ನಾರ್ವೆಯಲ್ಲಿ ಉಪಯುಕ್ತವಾದ ಮಿದುಮರಗಳೂ ಕಬ್ಬಿಣ ಕಲ್ಲಿದ್ದಲುಗಳೂ ಸಾಕಷ್ಟು ದೊರಕುತ್ತವೆ. ಹಾಗೆ ಸಮೀಪದಲ್ಲಿರುವ ಸಮುದ್ರವು ಆಳವಿಲ್ಲ. ತುಂಬಾ ಮೀನುಗಳನ್ನೂ ಹೊಂದಿರುತ್ತದೆ. ಹೀಗಾಗಿ ಕಾಗದ ತಯಾರಿಸಲೂ ಮತ್ಸ್ಯ ವ್ಯವಸಾಯ ನಡೆಸಲೂ ಸುಲಭ ಸಾಧ್ಯವಿದೆ. ಆದ್ದರಿಂದ ನಾರ್ವೆ ದೇಶವು ಹೆಸರು ಪಡೆದಿದೆ.

3) ಈ ಪ್ರದೇಶಗಳ ನದಿಗಳು ಚಳಿಗಾಲದಲ್ಲಿ ಹೆಪ್ಪುಗಟ್ಟಿ ಬೇಸಗೆಯಲ್ಲಿ ಕರಗಿ ರಭಸದಿಂದ ಹರಿಯುತ್ತವೆ. ಇದರಿಂದ ಜನರು ಚಳಿಗಾಲದಲ್ಲಿ ಮರಗಳನ್ನು ಕಡಿದು ನದಿಗಳಲ್ಲಿ ಹಾಕಿಬಿಡುತ್ತಾರೆ. ಬೇಸಗೆಯಲ್ಲಿ ಆ ದಿಮ್ಮಿಗಳು ತೇಲಿಕೊಂಡು ಹೋಗುವಾಗ ಬೇಕಾದ ಸ್ಥಳಗಳಲ್ಲಿ ಹಿಡಿದು ಕೂಡಹಾಕಿ ಕಾರ್ಖಾನೆಗೆ ಒಯ್ಯುತ್ತಾರೆ. ಇದು ಮರಗಳ ಸಾಗಾಣಿಕೆಗೆ ಸುಲಭೋಪಾಯ.

ಉ) 1) – ಇಲ್ಲಿನ ವ್ಯವಸಾಯೋತ್ಪನ್ನಗಳು – ಗೋಧಿ, ಜವೆಗೋಧಿ, ಆಲುಗಡ್ಡೆ ಓಟ್ಸ್‌ಗೋಧಿ. ಮೊದಲಾದುವು.

2) ಈ ಕಾಡುಗಳನ್ನು ಎಲೆಯುದುರುವ ಕಾಡುಗಳೆನ್ನುತ್ತಾರೆ.-ಏಕೆ? ಇಲ್ಲಿ ಎಲ್ಲಾ ಕಾಲಗಳಲ್ಲೂ ಮಳೆ ಬೀಳುತ್ತದೆ. ಹೀಗಾಗಿ ಈ ಮರಗಳು ತೇವಾಂಶವನ್ನು ದಪ್ಪವಾದ ತೊಗಟೆಯಲ್ಲುಳಿಸಿಕೊಂಡು ಬೇಸಗೆ ಮುಗಿದು ಚಳಿಗಾಲ ಬಂದೊಡನೆ ತಮ್ಮ ಎಲೆಗಳನ್ನುದುರಿಸಿಕೊಳ್ಳುತ್ತವೆ.

**30 ಸಮಶೀತೋಷ್ಣವಲಯದ ಹುಲ್ಲುಗಾವಲುಗಳು**

ಅ) ಈ ಪ್ರದೇಶಗಳು ಖಂಡಗಳ ಒಳಭಾಗದಲ್ಲಿದ್ದು, ಬೇರೆ ಬೇರೆ ಹೆಸರುಗಳಿಂದ ಕರೆಯಲ್ಪಡುತ್ತವೆ. ಇಲ್ಲಿ ಚಳಿಗಾಲದಲ್ಲಿ 25ರಿಂದ 30 ಸೆಂ. ಮೀಟರುಗಳಷ್ಟು ಮಳೆಸುರಿಯುತ್ತದೆ. ವಾಯುಗುಣ ವೈಪರೀತ್ಯವಿದೆ ಚಳಿಗಾಲ ದೀರ್ಘಕಾಲದ ವರೆಗಿರುವುದು. ಬೇಸಗೆಯಲ್ಲಿ ಹುಲ್ಲೆಲ್ಲ ಸುಟ್ಟುಹೋಗಿ ಮಳೆ ಬಿದ್ದೊಡನೆ ಹುಲುಸಾಗಿ ಬೆಳೆದು ಹಸುರಾಗಿ ಕಾಣುವುದು. ಸಸ್ಯವರ್ಗ-ಹುಲ್ಲು ಹೆಚ್ಚು. ಪ್ರಾಣಿವರ್ಗ-ಕಾಟಿ, ಕುದುರೆ, ದನಕರು, ಕುರಿ, ಜಿಂಕೆ ಮೊದಲಾದುವು (ಸ್ಟೆಪ್ಪೀಸಿನಲ್ಲಿ ಕಾಡು ಕುದುರೆ)

ಜನಜೀವನ:- ಮೊದಲು ಪಶುಪಾಲನೆಯೆ, ಇಲ್ಲಿನ ಮುಖ್ಯೋದ್ಯೋಗ. ಜನಸಂದಣಿ ಹೆಚ್ಚಿದಂತೆ ವ್ಯವಸಾಯವು ಮುಖ್ಯವೆನಿಸಿದೆ. ಸ್ಟೆಪ್ಪೀಸ್‌ನಲ್ಲಿ ಕೂಡ ಅಲೆದಾಡುವವರ ಸಂಖ್ಯೆ ಕಡಿಮೆಯಾಗಿ ಆಹಾರ ಧ್ಯಾಗಳನ್ನು ಬೆಳೆಸುತ್ತಾರೆ. ಆರ್ಜಂಟೈನಾ ದೇಶವು ಗೋಧಿ, ಮಾಂಸ, ಬೆಣ್ಣೆ, ಗಿಣ್ಣುಗಳಿಗೆ ಹೆಸರು ಪಟ್ಟಿದೆ. ಉದ್ಯೋಗಗಳು:- 1) ವ್ಯವಸಾಯ 2) ಪಶುಪಾಲನೆ, ಕುರಿ ಹಂದಿಗಳ ಮಾಂಸಗಳನ್ನುಡಬ್ಬಿಗಳಲ್ಲಿ ತುಂಬಿ ರಫ್ತು ಮಾಡುವರು. 3) ಬೆಣ್ಣೆ, ಗಿಣ್ಣು, ಕೊಬ್ಬು ತೆಗೆಯುವ ಕಾರ್ಖಾನೆಗಳನ್ನು ಸ್ಥಾಪಿಸಿರುವರು

ಇ) [ 1) ಏಷ್ಯಾದ ಮಧ್ಯಬಾಗ, ಯುರೋಪಿಯನ್ ರಷ್ಯಾದ ದಕ್ಷಿಣಭಾಗ, ಉತ್ತರಅಮೇರಿಕ ಮಧ್ಯಭಾಗ, ಕೆನಡಾ. ದಕ್ಷಿಣಅಮೇರಿಕದ ಮಧ್ಯಭಾಗ, ದಕ್ಷಿಣ ಆಫ್ರಿಕದ ಮಧ್ಯಭಾಗ ಆಸ್ಟ್ರೇಲಿಯಾದ ಮರ್ರೇಡಾರ್ಲಿಂಗ್ ನದಿಗಳ ಬಯಲುಪ್ರದೇಶ (ಹಂಗೇರಿಯಾ, ಮಂಚೂರಿಯಾ ಬಯಲು, ನ್ಯೂಸಿಲ್ಯಾಂಡಿನ ಕೆಂಟರಿಂಬರಿಬಯಲೂ ಸೇರುತ್ತವೆ)

2) ಮೊದಲು ಈ ಹುಲ್ಲುಗಾವಲುಗಳಲ್ಲಿ ಪಶುಪಾಲನೆ ಮುಖ್ಯವಾಗಿತ್ತು. ಈಗ ವ್ಯವಸಾಯವೂ ಪ್ರಗತಿಹೊಂದಿದೆ. ಹೊಸ ಖಂಡಗಳ

ಶೋಧವಾದ ಮೇಲೆ ಬಿಳಿಜನರು. ಬಂದು ವಿಶಾಲವಾದ ಕ್ಷೇತ್ರಗಳನ್ನು ಸ್ಥಾಪಿಸಿದರು. ಈ ಪ್ರದೇಶಗಳು ಸಮತಟ್ಟಾದುದರಿಂದ ಯಂತ್ರೋಪಕರಣ ಗಳನ್ನುಪಯೋಗಿಸಿದರು. ಈಗ ಯಂತ್ರಗಳಿಂದಲೇ ಹೆಚ್ಚಿನ ಕೃಷಿ ನಡೆಯು ತ್ತದೆ. ಸಾವಿರಾರು ಎಕ್ರೆ ಭೂಮಿಗಳಲ್ಲಿ ಗೋಧಿ, ಜೋಳಗಳ ಬೆಳೆ ಸಮೃದ್ಧವಾಗಿ ಬೆಳೆಯುತ್ತವೆ. ಪಶುಪಾಲನೆಯೂ ಭರದಿಂದ ನಡೆಯು ತ್ತದೆ. ಮಾಂಸಕ್ಕಾಗಿ ಕುರಿ ದನ ಹಂದಿಗಳು ಅಧಿಕ ಸಂಖ್ಯೆಯಲ್ಲಿ ಸಾಕಲ್ಪಡುವುವು. ಎಷ್ಟೊ ಕಾರ್ಖಾನೆಗಳನ್ನು ಸ್ಥಾಪಿಸಿ, ಬೆಣ್ಣೆ, ಗಿಣ್ಣು, ಮಾಂಸಗಳನ್ನು ಶೀತೀಕರಣ ಮಾಡಿ ಡಬ್ಬಿಗಳಲ್ಲಿ ತುಂಬಿ ರಫ್ತು ಮಾಡುವರು.

II 1) ಏಷ್ಯಾಖಂಡದ ಮಧ್ಯಭಾಗ — ಸ್ಟೇಪ್ಪೀಸ್
2) ಉತ್ತರ ಅಮೇರಿಕದ ,, — ಪ್ರೈರೀಸ್
3) ದಕ್ಷಿಣ ಅಮೇರಿಕದ ಆರ್ಜಂಟೈನಾ — ಪಂಪಾಸ್
4) ದಕ್ಷಿಣ ಆಫ್ರಿಕದ ಮಧ್ಯಭಾಗ — ಹೈವೆಲ್ಡ್
5) ಮರ್ರೇಡಾರ್ಲಿಂಗ್ ನದಿಗಳ ಬಯಲು — ಡಾರ್ಲಿಂಗ್‌ಡೌನ್ಸ್,

III ಮಿನಿಸೋಟಾ, ಸೇಂಟ್‌ಪಾಲ್, ಷಿಕಾಗೋ, ವಿನಿಪೆಗ್, ಕಲಗೇರಿ (ಟಾಷ್ಕಂಡ್ — ಆಸ್ಯಾ)

ಉ) 1. ಹೊಂದಿಸಿ ಬರೆಯಲಾಗಿದೆ. 1 ಕಲ್ಲೆಣ್ಣೆ (ಮುಖ್ಯ)–ಸಂಯುಕ್ತ ಅಮೇರಿಕ

2) ಗೋಧಿಯ ಕಣಜ – ಆರ್ಜಂಟೈನಾ 3) ಪೆಟ್ರೋಲಿಯಂ–ಅರೇಬಿಯಾ ಮರುಭೂಮಿ 4) ಆರ್ಟಿಸಿಯನ್‌ಬಾವಿ–ಆಸ್ಟ್ರೇಲಿಯಾ 5) ಮೀನುಗಾರಿಕೆ ಬ್ರಿಟಿಷ್ ಕೊಲಂಬಿಯಾ 6) ಕಲ್ಲಿದ್ದಲು ಮುಖ್ಯ–ಗ್ರೇಟ್ ಬ್ರಿಟನ್

## 31 ಮರುಭೂಮಿಗಳು

ಅ) ಪರಿಚಯ:– ಮಕರ ಕರ್ಕವೃತ್ತಗಳು ಹಾದುಹೋಗುವಲ್ಲಿ,

ಉಷ್ಣವಲಯದ ಹೊರಗಿರುವ ಪ್ರಸ್ಥಭೂಮಿಗಳಲ್ಲಿ ಮರುಭೂಮಿಗಳಿವೆ ಇಲ್ಲಿ ಮಳೆ ಅತೀ ವಿರಳ. ಉಷ್ಣ ಹೆಚ್ಚು, ಮಳೆಮಾರುತಗಳು ಬೀಸು ವುದಿಲ್ಲ. ಮರಳುಗಳು ನೂರಾರು ಮೈಲುಗಳವರೆಗಿವೆ. ಕೆಲವೆಡೆಜಲಾಶ ಯಗಳು, ಕೆಲವೆಡೆ ಮರಳುದಿನ್ನೆಗಳು, ಬಿರುಗಾಳಿಯೂ ಬೀಸುವು ದುಂಟು. ಹತ್ತಾರು ಮೈಲು ವಿಶಾಲವುಳ್ಳ ಪ್ರದೇಶಗಳಲ್ಲಿ ನಗರಗಳು ಬೆಳೆದಿವೆ ಸಸ್ಯಗಳು—ಕಳ್ಳಿ, ಕುರುಚಲು, ಮುಳ್ಳುಗಿಡಗಳು ಮತ್ತು ಖರ್ಜೂರದ ಮರಗಳು **ಪ್ರಾಣಿಗಳು;**— ಒಂಟೆ (ಮುಖ್ಯ ಆಡು. ಕುರಿ, ಕುದುರೆಗಳು) (ಲಾಮಾ, ಅಲ್ಪಾಕಾ,, ಚಮರಿ—ಶೀತಮರುಗಳಲ್ಲಿ)

ಜನಜೀವನ - ಕಷ್ಟಕರ, ಇಲ್ಲಿನವರು ದಪ್ಪಗೋಡೆಗಳ, ಅಥವಾ ಮಣ್ಣಿನ ಮೇಲ್ಛಾವಣಿಗಳ ಮನೆಗಳಲ್ಲಿ ಮತ್ತು ಡೇರೆಗಳಲ್ಲಿ ವಾಸಿಸುವರು. **ಉದ್ಯೋಗಗಳು:—** 1) ಜಲವಸತಿಯಿದ್ದಲ್ಲಿ ವ್ಯವಸಾಯ. ಮುಖ್ಯ ಖರ್ಜೂರದ ಕೃಷಿ, ಖರ್ಜೂರವನ್ನೊಣಗಿಸಿ ರವಾನಿಸುವುದು, ಭತ್ತ, ಗೋಧಿ ಗಳ ಬೆಳೆ ಬೆಳೆಸುವುದು. 2) ಪಶುಪಾಲನೆ

**ಗನಿಗಾರಿಕೆ—** ಕೆಲವೆಡೆ ಪೆಟ್ರೋಲಿಯಂ ಇದೆ. ರೇವುಗಳಿಗೆ ಸಾಗಿಸಿ ರಫ್ತು ಮಾಡುವುದು. 4) ಸಂಚಾರೀ ಜನರು (ವರ್ತಕರು) ಒಂಟೆಗಳಲ್ಲಿ ಸರಕುಗಳನ್ನು ಹೇರಿ ಗುಂಪುಗುಂಪಾಗಿ ಹೋಗಿ ವ್ಯಾಪಾರ ಮಾಡುವರು. ಆಸ್ಟ್ರೇಲಿಯಾದಲ್ಲಿ - ತೂತುಬಾವಿಗಳಿಂದ ನೀರನೆತ್ತಿ ವ್ಯವಸಾಯ ಮಾಡು ವರು. ಕಾರಣ - ಈಗ ಚಿನ್ನದ ಉತ್ಪತ್ತಿ ಕಡಮೆಯಾಗಿದೆ.

ಉತ್ಪನ್ನಗಳು 1) ವ್ಯವಸಾಯೋತ್ಪನ್ನಗಳು (ಗೋಧಿ, ಜೋಳ, ಭತ್ತ, ದ್ರಾಕ್ಷಿ, ಖರ್ಜೂರ (ಮುಖ್ಯ) 2) ಪೆಟ್ರೋಲಿಯಂ-ಅರೇಬಿಯಾ ಅಂಚಿನಲ್ಲಿ, ಮೆಕ್ಸಿಕೋಮರು ಭೂಮಿಯಲ್ಲಿ ಧಾರಾಳ ಇದೆ. 3) ನೈಟ್ರೇಟ್ ಉಪ್ಪು, ತಾಮ್ರ-ಚಿಲಿಯು ಪ್ರಸಿದ್ಧ 4) ಚಿನ್ನ-ಆಸ್ಟ್ರೇಲಿಯದಲ್ಲಿ

ಇ I 1) ಸಹರಾ - ಆಫ್ರಿಕಖಂಡ (ಉತ್ತರಭಾಗದಲ್ಲಿ) ಕಲಹರಿ- ದಕ್ಷಿಣಭಾಗದಲ್ಲಿ ಕೊಲರಡೋ ಮತ್ತು ಉತ್ತರ ಮೆಕ್ಸಿಕೊ ಮರುಭೂಮಿ- ಉತ್ತರ ಅಮೇರಿಕದಲ್ಲಿ 3) ಅಟಕಾಮಾ, ದಕ್ಷಿಣಪೆರು ಮತ್ತು ಚಿಲಿ-

ದಕ್ಷಿಣ ಅಮೇರಿಕದಲ್ಲಿ 4) ಅರೇಬಿಯಾ, ಗೋಬಿ, ಇರಾನ್, ಥಾರ್-ಆಸ್ಟ್ರೇಖಂಡದಲ್ಲಿ ಇವೆ. 5) ಆಸ್ಟ್ರೇಲಿಯಾ ಖಂಡದಲ್ಲಿ ಪಶ್ಚಿಮ ಮತ್ತು ಮಧ್ಯಭಾಗದಲ್ಲಿಯೂ ಮರುಭೂಮಿಗಳಿವೆ.

2) ಒಯಸಿಸ್-ಮರುಭೂಮಿಯಲ್ಲಿದ್ದ ಜಲಾಶಯ ಉತ್ಪನ್ನಗಳು ಖರ್ಜೂರ ವಿಶೇಷ, ಜಲವಸತಿಯಿದ್ದಲ್ಲಿ ಒಮ್ಮೊಮ್ಮೆ ಮಳೆ ಬರುವುದರಿಂದ ಭತ್ತ, ಗೋಧಿಕಾಳು, ಹಣ್ಣುಗಳಾಗುವುವು. **ಉದ್ಯೋಗಗಳು**—ಮುಖ್ಯವಾಗಿ ಖರ್ಜೂರಗಳನ್ನೊಣಗಿಸಿ ಡಬ್ಬಿಗಳಲ್ಲಿ ತುಂಬಿ ರಫ್ತು ಮಾಡುವುದು. ಬೇಸಾಯ ಮತ್ತು ಪಶುಪಾಲನೆಯನ್ನೂ ನಡೆಸುತ್ತಾರೆ.

II 1) ಮರುಭೂಮಿಯಲ್ಲಿ ಪ್ರಯಾಣ ಮಾಡಲು ಒಂಟೆಗಳನ್ನು ಉಪಯೋಗಿಸುತ್ತಾರೆ 2) ಮರುಭೂಮಿಯ ಮುಖ್ಯ ಖನಿಜ-ಪೆಟ್ರೋಲಿಯಂ 3) ಪ್ರಪಂಚದ ಅತಿ ದೊಡ್ಡ ಮರುಭೂಮಿ ಸಹರಾ 4) ಮರುಭೂಮಿಯ ಮುಖ್ಯ ಬೆಳೆ ಖರ್ಜೂರ

ಉ) ಬಿಟ್ಟಪದಗಳು ಆವರಣದಲ್ಲಿವೆ:— ಕಲಹರಿ ಮರುಭೂಮಿಯ ಜನರು — — ನಿರತರಾಗಿಲ್ಲ. (ವ್ಯವಸಾಯದಲ್ಲಾಗಲಿ, ಪಶುಪಾಲನೆಯಲ್ಲಾಗಲಿ 2) ಆಸ್ಯಾದಲ್ಲಿ ಅರೆಬಿಯಾ — — ದೇಶಗಳು ಕಲ್ಲೆಣ್ಣೆಯಿಂದ ಪ್ರಸಿದ್ಧವಾಗಿವೆ. (ಇರಾನ್, ಇರಾಕ್) 3) ಒಂಟೆಯ ವರ್ತಕರ ತಂಡಗಳಿಗೆ—ಎಂದು ಹೆಸರು (ಕೆರವಾನ್) 4) ರೇನಡಿಯರ್ ಎಂಬುದು — ಪ್ರಾಣಿ (ತಂಡ್ರಾಪ್ರದೇಶ)

## 32 ಶೀತವಲಯಪ್ರದೇಗಳು

ಅ) ಲಕ್ಷಣಗಳು:— ಈ ಪ್ರದೇಶದ ವಾಯುಗುಣ ಅತಿ ಶೀತ ನೀರು ಗಡ್ಡೆಕಟ್ಟುವುದು. ಮಂಜು ದಟ್ಟವಾಗಿ ಬೀಳುವುದು, ನಾಲ್ಕೈದು ತಿಂಗಳು ಸೂರ್ಯದರ್ಶನವೇ ಇಲ್ಲ. ಆಗ ಯಾವ ಸಸ್ಯಗಳೂ ಕಾಣುವುದಿಲ್ಲ. ಬೇಸಗೆ ಕಾಲ ಬಂದೊಡನೆ ಹಿಮುಕರಗಿ ಪಾಚಿ ಇತ್ಯಾದಿ ಸಸ್ಯಗಳು ಬೆಳೆಯುತ್ತವೆ. ಹಿಮುಕರಡಿ, ಹಿಮುಮೊಲ, ಕಡಲ್ನಾಯಿ, ಹಿಮುಸಾರಂಗ ಮೊದಲಾದ ಪ್ರಾಣಿಗಳು ಓಡಾಡತೊಡಗುವುವು.

**ಪ್ರದೇಶಗಳು:—** ದಕ್ಷಿಣ ಶೀತಪ್ರದೇಶದಲ್ಲಿ ಜನವಸತಿಯಿಲ್ಲ. ಉತ್ತರದಲ್ಲಿರುವ ಯುರೋಪ್, ಆಸ್ಯಾ ಶೀತಪ್ರದೇಶಗಳಿಗೆ ತಂಡ್ರಾಗಳೆಂದೂ ಉತ್ತರ ಅಮೇರಿಕದ ಈ ಪ್ರದೇಶಗಳಿಗೆ ಬ್ಯಾರನ್‌ಲ್ಯಾಂಡ್ ಎಂದೂ ಹೆಸರು. ಇಲ್ಲಿನವರು ಎಸ್ಕಿಮೊಗಳು. ತಂಡ್ರಾಪ್ರದೇಶದವರು ಲ್ಯಾಪ್, ಯುಕೂದ್ಸ್ ಮೊದಲಾದ ಪಂಗಡಗಳಿಗೆ ಸೇರಿದವರು.

**ಜನಜೀವನ:—** ಚಳಿಗಾಲದಲ್ಲಿ ಇಲ್ಲಿನ ಪ್ರಾಣಿ ಜೀವನವೇ ನಿಂತು ಹೋಗುತ್ತದೆ. ಬೇಸಗೆಕಾಲ ಬಂದೊಡನೆ ವಸಂತಕಾಲವೇ ಬಂದಂತಾಗುವುದು. ಪ್ರಾಣಿಬೇಟೆ, ಮೀನುಗಾರಿಕೆಯಿಂದ ಜೀವನ ನಡೆಸುವರು. ಬಿಲ್ಲುಬಾಣಗಳೇ ಆಯುಧಗಳು. ನಾಯಿಗಳಿಂದ ಅಥವಾ ಸಾರಂಗಗಳಿಂದ ಎಳೆಯಲ್ಪಡುವ ಬಂಡಿಗಳೇ ವಾಹನಗಳು, ಮೀನು ಹಿಡಿಯಲು ಚರ್ಮದ ದೋಣಿಗಳನ್ನುಪಯೋಗಿಸುವರು. ಚಳಿಗಾಲದಲ್ಲಿ ಮಂಜುಗಡ್ಡೆಯ ಇಗ್ಲೂಮನೆಗಳಲ್ಲೂ ಬೇಸಗೆ ಕಾಲದಲ್ಲಿ ಚರ್ಮದ ಡೇರೆಗಳಲ್ಲೂ ವಾಸಿಸುವರು. ಮೈಮುಚ್ಚುವುದಕ್ಕೆ ಚರ್ಮದ ಉಡುಪನ್ನೂ ದೀಪಉರಿಸುವುದಕ್ಕೆ ಕೊಬ್ಬಿನ ಎಣ್ಣೆ ಉಪಯೋಗಿಸುವರು.

ಇ) I 1) ಆ ಪ್ರದೇಶದಲ್ಲಿ ಬೇಸಗೆಕಾಲ ಬಂದಾಗ ಹಿಮವೆಲ್ಲ ಕರಗಿ ಪಾಚಿ ಮೊಲಾದ ಸಸ್ಯಗಳು ಬೆಳೆಯುವುವು. ಹಿಮಕರಡಿ, ಹಿಮನರಿ ಮೊದಲಾದ ಪ್ರಾಣಿಗಳು ಓಡಾಡತೊಡಗುವುವು. ಆಗ ಅಲ್ಲಿನ ಜನರು ಟಾಪಿಗ್ಸ್ ಎಂಬ ಡೇರೆಗಳನ್ನು ಕಟ್ಟಿಕೊಂಡು ವಾಸಮಾಡುವರು. ಬಿಲ್ಲು ಬಾಣಗಳಿಂದ ಬೇಟೆಯಾಡುವರು. ಬೇಟೆಗೂ ಹೇರುಸಾಗಿಸುವುದಕ್ಕೂ ಸ್ಲೇಡ್ಜುಗಳನ್ನುಪಯೋಗಿಸುವರು. ಕಾಯಕ್ ಎಂಬ ದೋಣಿಯ ಮೂಲಕ ಮೀನು ಹಿಡಿಯುವರು. ಹೀಗೆ ಬೇಟೆಯ ಮೂಲಕ ಮೀನುಮಾಂಸಗಳನ್ನು ಸಂಗ್ರಹಿಸುತ್ತಾರೆ. ಹೆಂಗಸರಾದರೂ ಆ ಪದಾರ್ಥಗಳನ್ನು ಚಳಿಗಾಲಕ್ಕಾಗಿ ಒಣಗಿಸಿ ಚೀಲದಲ್ಲಿ ತುಂಬಿಡುತ್ತಾರೆ. ಚಳಿಗಾಲ ಬಂತೆಂದರೆ ಅವರ ಜೀವನೋತ್ಸಾಹವೇ ನಿಂತುಬಿಡುತ್ತದೆ.

---

II 1) ಲ್ಯಾಪ್ಸ್, ಯುಕಟಿಡ್ಸ್ 2) ಎಸ್ಕಿಮೋ 3) ಸ್ಲೆಡ್ಜ್ ಎಸ್ನುವ ಚಕ್ರವಿಲ್ಲದ ಬಂಡಿಯನ್ನು 4) ಟಾಪಿಗ್ಸ್ 5) ಪ್ರಾಣಿಗಳ ಕೊಬ್ಬಿನ ಎಣ್ಣೆಯನ್ನು

ಉ) ಇವು ಏನು? ಎಲ್ಲಿವೆ?– ಬುಷ್‌ಮ್ಯಾನ್, ಗಲ್ಫ್‌ಸ್ಟ್ರೀಮ್, ರಾಕೇಟ್, ಲೀನಾ, ಟೈಗಾ, ಕೇರ್, ಮ್ಯಾನಿಯೋಕ, ಜಂತರ್‌ಮಂತರ್, ತಾರಾಪುರ, ಗ್ರಿನ್‌ವಿಚ್, ಗ್ರೇಟ್‌ಬ್ಯಾಂಕ್ಸ್, ಶಿಲಾವಲ್ಕ, ಖಾಟ್ಮಂಡ್ ಕೊಹಿಮಾ, ಅಲಾಸ್ಕಾ, ನೇಫಾ, ಫಿರಮಿಡ್ಸ್, ಟ್ರಾಂಬೇ, ಬರೌನಿ, ಡಿಯು, ವೆಸೂವಿಯಸ್, ಲೀಸ್ಟರ್, ರಾಂಚಿ, ಇಗ್ಲು, ಸೈಕ್ಲೋನ್, ಕಥಾರ, ಗ್ರೀನ್‌ಲ್ಯಾಂಡ್ ಇವರಾರು? – ಸರ್ವಶ್ರೀಗಳು– 1) ಜಿ. ಎಸ್. ಧಿಲನ್ 2) ಜಿ. ಎಲ್. ನಂದಾ 3) ದಿನೇಶಸಿಂಗ್ 4) ಡಾ. ಕರಣಸಿಂಗ್ 5) ತ್ರಿಗುಣಸೇನ್ 6) ಕೆ. ಕೆ. ಶಹಾ 7) ಸರ್ದಾರ್‌ಸ್ವರಲಾ ಸಿಂಗ್ 8) ರಾಮಕೃಷ್ಣ ಹೆಗ್ಡೆ 9) ಪಿ.ಸಿ. ಲಾಲ್ 10) ಅಚ್ಯುತಮೇನನ್ 11) ಚರಣಸಿಂಗ್ 12) ಕೆ. ಎಲ್. ರಾವ್ 13) ಎಸ್. ಎಸ್. ದಾವನ್ 14) ವಿ. ವಿ. ನಾಯಕ್ 15) ಎಸ್. ಎಮ್. ನಂದಾ 16) ಡಿ. ಸಂಜೀವಯ್ಯ 17) ಕ್ವೀನ್ ಎಲಿಜಬೆತ್ 18) ಕರುಣಾನಿಧಿ 19) ವಿಜಯಲಕ್ಷ್ಮಿ ಪಂಡಿತ್ 20) ಸಿ. ರಾಜ ಗೋಪಾಲಾಚಾರ್ಯರು



# ನಮ್ಮ ಪ್ರಕಟಣೆಗಳು

| | | | |
|---|---|---|---|
| 1 | ಕನ್ನಡ ಪದ್ಯದ ಟಿಪ್ಪಣಿ | V Std. | 0-90 |
| 2 | ,, ,, | VI ,, | 1-00 |
| 3 | ,, ,, | VII ,, | 1-10 |
| 4 | ಕನ್ನಡ ಪ್ರಶ್ನೋತ್ತರ ಮಾಲೆ | X ,, | 1-50 |
| 5 | English Guide | VI ,, | 1-00 |
| 6 | ,, ,, | VII ,, | 1-80 |
| 7 | ,, ,, | X ,, | 1-50 |
| 8 | Non detailed Eng. Guide | X ,, | 0-75 |
| 9 | ಕಂದನ ಕೊಳಲು | (ಶಿಶುಗೀತೆ) | 0-37 |

---

| | | | |
|---|---|---|---|
| 1 | ಗೀತಾ ಸಾಂಗತ್ಯ | | 1-50 |
| 2 | ತದ್ಭವ ಸಂಸ್ಕೃತ ಶಬ್ದ ಕೋಶ | | 0-50 |
| 3 | ದಾನವೀರ ಕರ್ಣ | (ಯಕ್ಷಗಾನ) | 0-50 |
| 4 | ಅಶೋಕ ಸೌಂದರೀಪರಿಣಯ | ( ,, ) | 0-75 |
| 5 | ವಿಷ್ಣುಲೀಲೆ | ( ,, ) | 0-35 |
| 6 | ಗಣೇಶ ಮಹಾತ್ಮೆ | ( ,, ) | 0-25 |
| 7 | ಮಧುಪುರ ಮಹಾತ್ಮೆ | ( ,, ) | 0-32 |
| 8 | ಶ್ರೀರಾಮ ಪಟ್ಟಾಭಿಷೇಕ | ( ,, ) | 1-00 |
| 9 | ರತಿಕಲ್ಯಾಣ (ಅರ್ಥಸಹಿತ) | ( ,, ) | 1-25 |
| 10 | ಸುಧನ್ವ ಕಾಳಗ ( ,, ) | ( ,, ) | 1-00 |
| 11 | ದೇವೀ ಭಕ್ತಿಸಾರ | | 0-25 |
| 12 | ಹರಿ ಭಜನೆ | | 0-25 |
| 13 | ಕೃಷ್ಣಾನಂದ ಕೀರ್ತನ ತರಂಗ | | 0-40 |
| 14 | ಶಿವಾನಂದ ,, | | 0-40 |
| 15 | ಸತ್ಯಸಾಯಿ ,, | | 0-25 |
| 16 | ದಾಸರ ಪದಗಳು | | 0-40 |